# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೧<br>**Volume 151** | ಬೆಂಗಳೂರು, ಗುರುವಾರ, ಜುಲೈ ೨೮, ೨೦೧೬ (ಶ್ರಾವಣ ೬, ಶಕ ವರ್ಷ ೧೯೩೮)<br>**Bengaluru, Thursday, July 28, 2016 ( Shravana 6, Shaka Varsha 1938)** | ಸಂಚಿಕೆ ೩೦<br>**Issue 30** |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಪೌರಾಡಳಿತ ಸೇವೆಯ ವಿವಿಧ ವೃಂದದ ನೌಕರರುಗಳನ್ನು ಕೆ.ಎಂ.ಎ.ಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸುವ ಕುರಿತು – ಆದೇಶ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ನಅಇ 258 ಇಎಂಸಿ 94, ದಿನಾಂಕ : 09–12–1998.
2. ಸರ್ಕಾರದ ಆದೇಶ ಸಂಖ್ಯೆ : ನಅಇ 34 ಇಎಂಸಿ 2005, ಬೆಂಗಳೂರು, ದಿನಾಂಕ : 29–07–2005.
3. ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ : 9009 : ಡಿಎಂಎ : 80 : ಕೆಎಂಎಎಸ್ : 2014–15, ದಿನಾಂಕ : 30–03–2016.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶ ಸಂಖ್ಯೆ : ನಅಇ 258 ಇಎಂಸಿ 94, ದಿನಾಂಕ : 09–12–1998ರ ಕಾರ್ಯಕಾರಿ ಆದೇಶದ ಪ್ರಕಾರ ಐದು ವರ್ಷ ಸೇವೆ ಸಲ್ಲಿಸಿದ ಪುರಸಭಾ ಹಾಗೂ ಪೌರಾಡಳಿತ ನಿರ್ದೇಶನಾಲಯದ ವಿವಿಧ ವೃಂದದ ನೌಕರರನ್ನು ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ಕಾರ್ಯಕಾರಿ ಆದೇಶದ ಮೂಲಕ ವಿಲೀನಗೊಳಿಸಲು ಅವಕಾಶ ಕಲ್ಪಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದನ್ವಯ ಪೌರ ಸೇವೆಯ ವಿವಿಧ ವೃಂದದ ನೌಕರರುಗಳನ್ನು ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸಲು, ಮತ್ತು ಸದರಿ ವೃಂದದ ನೇರ ನೇಮಕಾತಿ ಹುದ್ದೆಗಳನ್ನು ತುಂಬಲು ಈ ಕೆಳಕಂಡಂತೆ ಅನುಪಾತವನ್ನು ನಿಗಧಿಪಡಿಸಿ ಆದೇಶಿಸಲಾಗಿದೆ :–

| | | |
|---|---|---|
| I. | Direct Recruitment | 33 1/3 |
| II. | By Absorption | 66 2/3 |
| 1) | Managers belongs to Municipal Service | 21.50% |
| 2) | Revenue Officers belongs to Municipal Service | 21.50% |
| 3) | Sr. Health Inspectors belongs to Municipal Service | 21.50% |
| 4) | Manager in the office of the Director of Municipal Administration | 2.16% |

ಮೇಲೆ ಓದಲಾದ ಕ್ರಮ ಸಂಖ್ಯೆ (3)ರನ್ವಯ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ರವರು ಪ್ರಸ್ತುತ ನಗರ ಸ್ಥಳೀಯ ಸಂಸ್ಥೆಗಳಲ್ಲಿ ವಿವಿಧ ವೃಂದದಲ್ಲಿ ಐದು ವರ್ಷಕ್ಕಿಂತ ಹೆಚ್ಚಿಗೆ ಸೇವೆ ಸಲ್ಲಿಸುತ್ತಿರುವ ನೌಕರರುಗಳನ್ನು ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸುವ ಬಗ್ಗೆ ಪ್ರಸ್ತಾವನೆ ಸಲ್ಲಿಸಿದ್ದು, ಅದರಂತೆ ರಾಜ್ಯದಲ್ಲಿ ಒಟ್ಟು 90 ಪಟ್ಟಣ ಪಂಚಾಯತಿಗಳು ಅಸ್ತಿತ್ವದಲ್ಲಿದ್ದು, ಪ್ರಸ್ತುತ ರಾಜ್ಯ ವೃಂದ/ಮೂಲ ವೃಂದದಲ್ಲಿ 34 ಹುದ್ದೆಗಳು ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದದ ಹುದ್ದೆಗಳು ಖಾಲಿ ಇದ್ದು, ಪೌರ ಸೇವೆಯ ಅರ್ಹ ನೌಕರರನ್ನು ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳಿಸಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಪೌರಾಡಳಿತ ಸೇವೆಯ ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸಲು ವಿವಿಧ ವೃಂದದ ನೌಕರರುಗಳಿಗೆ ಮೀಸಲಿರಿಸಿರುವ/ಲಭ್ಯವಿರುವ ಹುದ್ದೆಗಳು ಮತ್ತು ಅರ್ಹರಿರುವ ನೌಕರರುಗಳ ಮಾಹಿತಿ ಈ ಕೆಳಕಂಡಂತೆ ಇರುತ್ತದೆ :–

| ಕ್ರ.ಸ. | ವೃಂದವಾರು ನೌಕರರ ಮಾಹಿತಿ | ವೃಂದವಾರು ಲಭ್ಯವಿರುವ ಹುದ್ದೆಗಳ ಮಾಹಿತಿ (ರಾಜ್ಯ ವೃಂದದಲ್ಲಿ) | ಅರ್ಹತೆ ಹೊಂದಿರುವ ನೌಕರರ ಸಂಖ್ಯೆ (ರಾಜ್ಯ ವೃಂದದಲ್ಲಿ) |
|---|---|---|---|
| 1 | ಕಛೇರಿ ವ್ಯವಸ್ಥಾಪಕರ ವೃಂದದಲ್ಲಿ | 08 | 05 ಜನ |
| 2 | ಕಂದಾಯಾಧಿಕಾರಿ ವೃಂದದಲ್ಲಿ | 13 | 05 ಜನ |
| 3 | ಹಿರಿಯ ಆರೋಗ್ಯ ನಿರೀಕ್ಷಕ ವೃಂದದಿಂದ | 11 | 05 ಜನ |
| 4 | ಪೌರಾಡಳಿತ ನಿರ್ದೇಶನಾಲಯದ ವ್ಯವಸ್ಥಾಪಕರ ವೃಂದದಿಂದ | 02 | ಈ ವೃಂದದಲ್ಲಿ ಅರ್ಹತೆ ಹೊಂದಿರುವವರು ಯಾರು ಇರುವುದಿಲ್ಲ. |
| | **ಒಟ್ಟು** | **34** | **15 ಜನ** |

ಸರ್ಕಾರದ ಆದೇಶ ಸಂಖ್ಯೆ : ನಅಇ 258 ಇಎಂಸಿ 94, ದಿನಾಂಕ : 09–12–1998 ಮತ್ತು ಸರ್ಕಾರದ ಆದೇಶ ಸಂಖ್ಯೆ : ನಅಇ 34 ಇಎಂಸಿ 2005, ದಿನಾಂಕ : 29–07–2005ರ ಆದೇಶಗಳಲ್ಲಿನ ಮಾರ್ಗಸೂಚಿರನ್ವಯ ಹಾಗೂ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರು ಸಲ್ಲಿಸಿರುವ ಪ್ರಸ್ತಾವನೆಯನ್ವಯ ಈ ಕೆಳಕಂಡ ಪೌರಾಡಳಿತ ಸೇವೆಯ ವಿವಿಧ ವೃಂದದ ನೌಕರರುಗಳನ್ನು ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2ಕ್ಕೆ ವಿಲೀನಗೊಳಿಸಲು ಅರ್ಹರಿರುತ್ತಾರೆ.

**1) ಕಛೇರಿ ವ್ಯವಸ್ಥಾಪಕರ ವೃಂದದಿಂದ ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ಅರ್ಹತೆ ಹೊಂದಿರುವ ನೌಕರರ ವಿವರ**

| ಕ್ರ.ಸ. | ನೌಕರರ ಹೆಸರು | ಕಛೇರಿ ವ್ಯವಸ್ಥಾಪಕರ ಹುದ್ದೆಗೆ ಬಂದ ದಿನಾಂಕ | ಜ್ಯೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ |
|---|---|---|---|
| 1 | ಶ್ರೀ ಜೆ. ಭೀಮರಾಜು | 10–05–2005 | 189 |
| 2 | ಶ್ರೀ ಹೆಚ್. ಮಹಂತೇಶ್ | 10–05–2005 | 191 |
| 3 | ಶ್ರೀ ಬಿ.ಆರ್. ಈಶ್ವರಪ್ಪ | 10–05–2005 | 194 |
| 4 | ಶ್ರೀ ನಿಸ್ಸಾರ್ ಅಹ್ಮದ್ | 28–05–2005 | 200 |
| 5 | ಶ್ರೀ ಶಿವಪ್ಪ ಗಿರಿಯಪ್ಪ ಅಂಬಿಗೇರ | 28–05–2005 | 208 |

**2) ಕಂದಾಯಾಧಿಕಾರಿ ವೃಂದದಿಂದ ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ಅರ್ಹತೆ ಹೊಂದಿರುವ ನೌಕರರ ವಿವರ**

| ಕ್ರ.ಸ. | ನೌಕರರ ಹೆಸರು | ಕಂದಾಯಾಧಿಕಾರಿ ಹುದ್ದೆಗೆ ಬಂದ ದಿನಾಂಕ | ಜ್ಯೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ |
|---|---|---|---|
| 1 | ಶ್ರೀ ಸೈಯದ್ ಮಿನ್‌ಹಾಜುದ್ದೀನ್ ಖತೀಬ್ | 01–01–2005 | 114 |
| 2 | ಶ್ರೀ ಎಸ್.ಎ. ಮಹಾಜನ್ | 01–01–2005 | 122 |
| 3 | ಶ್ರೀ ರಮೇಶ್ ಪಾಂಡುರಂಗ ಜಾಧವ್ | 27–09–2006 | 153 |
| 4 | ಶ್ರೀ ಎನ್. ನಾಗೇಂದ್ರ | 27–09–2006 | 156 |
| 5 | ಶ್ರೀ ಬಿ.ಎ. ಸೌದಾಗರ್ | 08–12–2007 | 160 |

**3) ಹಿರಿಯ ಆರೋಗ್ಯ ನಿರೀಕ್ಷಕರ ವೃಂದದಿಂದ ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ಅರ್ಹತೆ ಹೊಂದಿರುವ ನೌಕರರ ವಿವರ**

| ಕ್ರ.ಸ. | ನೌಕರರ ಹೆಸರು | ಹಿರಿಯ ಆರೋಗ್ಯ ನಿರೀಕ್ಷಕರ ಹುದ್ದೆಗೆ ಬಂದ ದಿನಾಂಕ | ಜ್ಯೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ |
|---|---|---|---|
| 1 | ಶ್ರೀ ಅಶೋಕ್ ಸಿ. ಮಠದ | 27–02–1998 | 202 |
| 2 | ಶ್ರೀ ಮಹೇಶ್ ಎನ್. ಹೇರಲಗಿ | 09–02–2005 | 209 |
| 3 | ಶ್ರೀ ಮಹ್ಮದ್‌ಶರೀಫ ಎ. ಚೂಡಿಗಾರ | 09–02–2005 | 217 |
| 4 | ಶ್ರೀ ಜಿ.ಬಿ. ಡಂಬಳ | 14–09–2005 | 229 |
| 5 | ಶ್ರೀ ಜೆ.ಬಿ. ಹುಲಗೆಜ್ಜಿ | 18–01‘–2010 | 231 |

ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರು ಪೌರ ಸೇವೆಯ ವಿವಿಧ ವೃಂದದ ನೌಕರರುಗಳನ್ನು ಕೆ.ಎಂ.ಎ.ಎಸ್ ಮುಖಾಧಿಕಾರಿ ಶ್ರೇಣಿ–2 ವೃಂದದ ಹುದ್ದೆಗಳಿಗೆ ವಿಲೀನಗೊಳಿಸಲು ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಪರಿಶೀಲಿಸಿ, ಸೇವಾ ಮಾಹಿತಿಗಳು/ಅಗತ್ಯ ದಾಖಲೆಗಳು, ಸೇವಾ ವಿವರಗಳನ್ನು ಪರಿಶೀಲಿಸಿ ಸದರಿ ನೌಕರರುಗಳನ್ನು ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳಿಸಲು ತೀರ್ಮಾನಿಸಲಾಗಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ನಅಇ 48 ಇಎಂಸಿ 2016, ಬೆಂಗಳೂರು, ದಿನಾಂಕ : 29–04–2016.**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಕಲಂ 365(1)(2)(ಎ) ಪ್ರಕಾರ ಮೇಲೆ ತಿಳಿಸಿರುವ ವಿವಿಧ ವೃಂದಗಳ ಪೌರ ಸೇವೆಯ ವಿವಿಧ ವೃಂದದ **ಹದಿನೈದು ಜನ (15)** ನೌಕರರುಗಳನ್ನು ಅವರ ಸೇವಾ

ಜ್ಯೇಷ್ಠತೆಯನ್ನು ಪರಿಗಣಿಸಿ, ತಕ್ಷಣದಿಂದ ಜಾರಿಗೆ ಬರುವಂತೆ, ಕರ್ನಾಟಕ ಪೌರಾಡಳಿತ ಸೇವೆಯ ವೃಂದದ ಅಧಿಕಾರಿಗಳೆಂದು ವೇತನ ಶ್ರೇಣಿ ₹.17650–32000/–ರ ಮುಖ್ಯಾಧಿಕಾರಿ ಶ್ರೇಣಿ–2ರ ಹುದ್ದೆಯಲ್ಲಿ ಸ್ಥಾನಪನ್ನ ಆಧಾರದ ಮೇಲೆ ಅವರುಗಳ ಅಂತಿಮ ವೇತನವನ್ನೊಳಗೊಂಡಂತೆ (ಈ ಅಧಿಕಾರಿಗಳ ಹಿಂದಿನ ಹುದ್ದೆಯ ವೇತನ ಶ್ರೇಣಿಯು ಮುಖ್ಯಾಧಿಕಾರಿ ಶ್ರೇಣಿ–2 ವೃಂದದ ವೇತನ ಶ್ರೇಣಿಗಿಂತ ಹೆಚ್ಚಿನ ವೇತನ ಶ್ರೇಣಿಯನ್ನು ಹೊಂದಿದಲ್ಲಿ ಆ ವೇತನ ಶ್ರೇಣಿಯಲ್ಲಿಯೇ ಅವರ ವೇತನವನ್ನು ಮುಂದುವರೆಸಿ) ಎಲ್ಲಾ ಸೇವಾ ಸೌಲಭ್ಯಗಳನ್ನು ನೀಡಿ, ಕೆ.ಎಂ.ಎಎಸ್ ಅಧಿಕಾರಿಗಳಿಗೆ ಅನ್ವಯವಾಗುವ ಸೇವಾ ನಿಯಮಾವಳಿಗೊಳಪಟ್ಟು ಹಾಗೂ ಈ ಆದೇಶದಲ್ಲಿ ವಿಧಿಸಿರುವ ಷರತ್ತಿಗೆ ಒಳಪಟ್ಟು ವಿಲೀನಗೊಳಿಸಿ, ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದಿನ ಆದೇಶದವರೆಗೆ ಮುಂದುವರೆಸಿ ಆದೇಶಿಸಲಾಗಿದೆ.

**1) ಕಛೇರಿ ವ್ಯವಸ್ಥಾಪಕರ ವೃಂದದಿಂದ ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳಿಸಿರುವ ಅಧಿಕಾರಿ/ನೌಕರರ ಹೆಸರು**

| ಕ್ರ.ಸ. | ನೌಕರರ ಹೆಸರು | ದಿನಾಂಕ 01–01–2014ಕ್ಕೆ ಇರುವಂತೆ ಜ್ಯೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ |
|---|---|---|
| 1 | ಶ್ರೀ ಜಿ. ಭೀಮರಾಜು | 189 |
| 2 | ಶ್ರೀ ಹೆಚ್. ಮಹಂತೇಶ್ | 191 |
| 3 | ಶ್ರೀ ಬಿ.ಆರ್. ಈಶ್ವರಪ್ಪ | 194 |
| 4 | ಶ್ರೀ ಎನ್.ನಿಸ್ಸಾರ್ ಅಹ್ಮದ್ | 200 |
| 5 | ಶ್ರೀ ಶಿವಪ್ಪ ಗಿರಿಯಪ್ಪ ಅಂಬಿಗೇರ | 208 |

**2) ಕಂದಾಯಾಧಿಕಾರಿ ವೃಂದದಿಂದ ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳಿಸಿರುವ ಅಧಿಕಾರಿ/ನೌಕರರ ಹೆಸರು**

| ಕ್ರ.ಸ. | ನೌಕರರ ಹೆಸರು | ದಿನಾಂಕ 01–01–2014ಕ್ಕೆ ಇರುವಂತೆ ಜ್ಯೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ |
|---|---|---|
| 1 | ಶ್ರೀ ಸೈಯದ್ ಮಿನ್‌ಹಾಜುದ್ದೀನ್ ಖತೀಬ್ | 114 |
| 2 | ಶ್ರೀ ಎಸ್.ಎ. ಮಹಾಜನ್ | 122 |
| 3 | ಶ್ರೀ ರಮೇಶ್ ಪಾಂಡುರಂಗ ಜಾಧವ್ | 153 |
| 4 | ಶ್ರೀ ಎನ್. ನಾಗೇಂದ್ರ | 156 |
| 5 | ಶ್ರೀ ಬಿ.ಎ. ಸೌದಾಗರ್ | 160 |

**3) ಹಿರಿಯ ಆರೋಗ್ಯ ನಿರೀಕ್ಷಕರ ವೃಂದದಿಂದ ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ವಿಲೀನಗೊಳಿಸಿರುವ ಅಧಿಕಾರಿ / ನೌಕರರ ಹೆಸರು**

| ಕ್ರ.ಸ. | ನೌಕರರ ಹೆಸರು | ದಿನಾಂಕ 01–01–2014ಕ್ಕೆ ಇರುವಂತೆ ಜ್ಯೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ |
|---|---|---|
| 1 | ಶ್ರೀ ಅಶೋಕ್ ಸಿ. ಮಠದ | 202 |
| 2 | ಶ್ರೀ ಮಹೇಶ್ ಎನ್. ಹೇರಲಗಿ | 209 |
| 3 | ಶ್ರೀ ಮಹ್ಮದ್‌ಶರೀಫ ಎ. ಚೂಡಿಗಾರ | 217 |
| 4 | ಶ್ರೀ ಜಿ.ಬಿ. ಡಂಬಳ | 229 |
| 5 | ಶ್ರೀ ಜೆ.ಬಿ. ಹುಲಗೆಜ್ಜಿ | 231 |

**ಷರತ್ತುಗಳು :–**

ಈ ಮೇಲ್ಕಂಡ ನೌಕರರುಗಳು ಸರ್ಕಾರದ ಆದೇಶ ಸಂಖ್ಯೆ : ನಅಇ 258 ಇಎಂಸಿ 94, ದಿನಾಂಕ : 09–12–1998 ರಲ್ಲಿ ತಿಳಿಸಿರುವಂತೆ ಮುಖ್ಯಾಧಿಕಾರಿ ಶ್ರೇಣಿ–2 ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳನ್ನು ಮುಖ್ಯಾಧಿಕಾರಿ ಶ್ರೇಣಿ–2 ಹುದ್ದೆಯಲ್ಲಿ ವಿಲೀನಗೊಳಿಸಿದ/ಈ ಆದೇಶ ಹೊರಡಿಸಿದ ದಿನಾಂಕದಿಂದ ಎರಡು ವರ್ಷದೊಳಗಾಗಿ ಉತ್ತೀರ್ಣರಾಗತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿದ್ದಿಕ್ ಪಾಷ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

P.R. 339

S.C. 200

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ನಗರ ಜಿಲ್ಲಾ ವ್ಯಾಪ್ತಿಗೆ ಒಳಪಡುವ ಧಾರ್ಮಿಕ ದತ್ತಿ ಇಲಾಖೆಯ ದೇವಾಲಯಗಳಲ್ಲಿ ಪಾದರಕ್ಷೆ ಕಾಯ್ದುಕೊಳ್ಳುವ ಹಕ್ಕಿನಲ್ಲಿ ಮೀಸಲಾತಿ ಕಲ್ಪಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಕಂಇ 84 ಮುಆಬಿ 2007, ದಿನಾಂಕ : 14-07-2008.
2. ಸರ್ಕಾರದ ಆದೇಶ ಸಂಖ್ಯೆ : ಕಂಇ 14 ಮುಆಬಿ 2015, ದಿನಾಂಕ : 08-04-2015.
3. ಸರ್ಕಾರದ ಆದೇಶ ಸಂಖ್ಯೆ : ಕಂಇ 53 ಮುಆಬಿ 2015, ದಿನಾಂಕ : 09-11-2015.
4. ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಎಡಿಎಂ/11/ಇತರೆ/ಸಿಆರ್/119/2015-16, ದಿನಾಂಕ : 04-01-2016.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿ ಮುಜರಾಯಿ ಇಲಾಖೆಯ ಅಧೀನಕ್ಕೊಳಪಟ್ಟ ಧಾರ್ಮಿಕ ಸಂಸ್ಥೆಗಳಿಗೆ ಸೇರಿದ ಕಟ್ಟಡ, ಖಾಲಿ ಜಾಗ, ಅಂಗಡಿ, ಮಳಿಗೆಗಳನ್ನು ಬಹಿರಂಗ ಹರಾಜು ಮಾಡಿ, ಗುತ್ತಿಗೆ ನೀಡುವ ಮತ್ತು ಅಂತಹ ಗುತ್ತಿಗೆಯನ್ನು ನವೀಕರಿಸುವ ಸಂಬಂಧ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡಗಳಿಗೆ ಕ್ರಮವಾಗಿ ಶೇ. 20 ಮತ್ತು ಶೇ. 5ರಷ್ಟು ಮೀಸಲಾತಿಯನ್ನು ಕಲ್ಪಿಸಲಾಗಿರುತ್ತದೆ. ನಂತರ ಮೇಲೆ ಓದಲಾದ (2)ರಲ್ಲಿ ಅಂಗವಿಕಲರಿಗೂ ಸಹ ಶೇ. 3ರಷ್ಟು ಮೀಸಲಾತಿಯನ್ನು ಕಲ್ಪಿಸಿ ಕರ್ನಾಟಕ ರಾಜ್ಯ ವ್ಯಾಪ್ತಿಗೆ ಒಳಪಡುವಂತೆ ಒಟ್ಟು ಶೇ. 28ರಷ್ಟು ಮೀಸಲಾತಿಯನ್ನು ಕಡ್ಡಾಯವಾಗಿ ಪಾಲಿಸುವಂತೆ ಆದೇಶಿಸಲಾಗಿರುತ್ತದೆ.

ತದನಂತರ ಮೇಲೆ ಓದಲಾದ (3)ರಲ್ಲಿ ಮುಜರಾಯಿ ಇಲಾಖೆಯ ಅಧೀನಕ್ಕೊಳಪಟ್ಟ ಧಾರ್ಮಿಕ ಸಂಸ್ಥೆಗಳಿಗೆ ಸೇರಿದ ಕಟ್ಟಡ, ಖಾಲಿ ಜಾಗ, ಅಂಗಡಿ, ಮಳಿಗೆಗಳನ್ನು ಹರಾಜು ಮಾಡಿ, ಗುತ್ತಿಗೆ ನೀಡುವ ಮತ್ತು ನವೀಕರಿಸುವ ಸಂಬಂಧ ದೇವಾಲಯಗಳಲ್ಲಿ ಪಾದರಕ್ಷೆ ಕಾಯ್ದುಕೊಳ್ಳುವ ಗುತ್ತಿಗೆ ನೀಡುವಲ್ಲಿಯೂ ಸಹ ಪರಿಶಿಷ್ಠ ಜಾತಿಯವರಿಗೆ 20% ಹಾಗೂ ಪರಿಶಿಷ್ಠ ಪಂಗಡದವರಿಗೆ 5% ರಷ್ಟು ಮೀಸಲಾತಿಯನ್ನು ಕಲ್ಪಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ (4)ರ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ದಿನಾಂಕ : 04-01-2016ರ ಪತ್ರದಲ್ಲಿ, ಬೆಂಗಳೂರು ನಗರ ಜಿಲ್ಲಾ ವ್ಯಾಪ್ತಿಗೆ ಒಳಪಡುವ ಈ ಕೆಳಕಂಡ 08 ದೇವಾಲಯಗಳಲ್ಲಿ ಪಾದರಕ್ಷೆ ಕಾಯ್ದುಕೊಳ್ಳುವ ಹಕ್ಕಿನ ಮೀಸಲಾತಿಯನ್ನು ಕೂಡಲೇ ಅಳವಡಿಸಿಕೊಳ್ಳಲು ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

1. ಶ್ರೀ ಬನಶಂಕರಿ ದೇವಾಲಯ, ಎಸ್. ಕರಿಯಪ್ಪ ರಸ್ತೆ, ಬೆಂಗಳೂರು.
2. ಶ್ರೀ ಪ್ರಸನ್ನ ವೀರಾಂಜನೇಯಸ್ವಾಮಿ ದೇವಾಲಯ, ಮಹಾಲಕ್ಷ್ಮೀಪುರಂ, ಬೆಂಗಳೂರು.
3. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ದೇವಾಲಯ, ಕೋಟೆ, ಬೆಂಗಳೂರು.
4. ಶ್ರೀ ಕುಮಾರಸ್ವಾಮಿ ಮತ್ತು ಸಮೂಹ ದೇವಾಲಯಗಳು, ಹನುಮಂತನಗರ, ಬೆಂಗಳೂರು.
5. ಶ್ರೀ ಗವಿಗಂಗಾಧರೇಶ್ವರಸ್ವಾಮಿ ದೇವಾಲಯ, ಗವಿಪುರಂ, ಗುಟ್ಟಹಳ್ಳಿ, ಬೆಂಗಳೂರು.
6. ಶ್ರೀ ದೊಡ್ಡಗಣಪತಿ ಮತ್ತು ಶ್ರೀ ಮಲ್ಲಿಕಾರ್ಜುನಸ್ವಾಮಿ ದೇವಾಲಯ, ಬಸವನಗುಡಿ, ಬೆಂಗಳೂರು.
7. ಶ್ರೀ ಕಾರಂಜಿ ಆಂಜನೇಯಸ್ವಾಮಿ ದೇವಾಲಯ, ಬಸವನಗುಡಿ, ಬೆಂಗಳೂರು.
8. ಶ್ರೀ ಆಂಜನೇಯಸ್ವಾಮಿ ದೇವಾಲಯ, ಯಲಹಂಕ ಗೇಟ್, ಬೆಂಗಳೂರು.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಂಇ 53 ಮುಆಬಿ 2015, ಬೆಂಗಳೂರು, ದಿನಾಂಕ : 16-04-2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಂಗಳೂರು ನಗರ ಜಿಲ್ಲಾ ವ್ಯಾಪ್ತಿಗೆ ಒಳಪಡುವ ಈ ಕೆಳಕಂಡ 08 ದೇವಾಲಯಗಳಲ್ಲಿ ಪಾದರಕ್ಷೆ ಕಾಯ್ದುಕೊಳ್ಳುವ ಗುತ್ತಿಗೆ ನೀಡುವಲ್ಲಿ, ಪರಿಶಿಷ್ಠ ಜಾತಿಯವರಿಗೆ ಹಾಗೂ ಪರಿಶಿಷ್ಠ ಪಂಗಡದವರಿಗೆ ನಿಯಮಾನುಸಾರ ಮೀಸಲಾತಿಯನ್ನು ಅಳವಡಿಸಿಕೊಳ್ಳಲು ಆದೇಶಿಸಿದೆ.

1. ಶ್ರೀ ಬನಶಂಕರಿ ದೇವಾಲಯ, ಎಸ್. ಕರಿಯಪ್ಪ ರಸ್ತೆ, ಬೆಂಗಳೂರು.
2. ಶ್ರೀ ಪ್ರಸನ್ನ ವೀರಾಂಜನೇಯಸ್ವಾಮಿ ದೇವಾಲಯ, ಮಹಾಲಕ್ಷ್ಮೀಪುರಂ, ಬೆಂಗಳೂರು.
3. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ದೇವಾಲಯ, ಕೋಟೆ, ಬೆಂಗಳೂರು.
4. ಶ್ರೀ ಕುಮಾರಸ್ವಾಮಿ ಮತ್ತು ಸಮೂಹ ದೇವಾಲಯಗಳು, ಹನುಮಂತನಗರ, ಬೆಂಗಳೂರು.
5. ಶ್ರೀ ಗವಿಗಂಗಾಧರೇಶ್ವರಸ್ವಾಮಿ ದೇವಾಲಯ, ಗವಿಪುರಂ, ಗುಟ್ಟಹಳ್ಳಿ, ಬೆಂಗಳೂರು.
6. ಶ್ರೀ ದೊಡ್ಡಗಣಪತಿ ಮತ್ತು ಶ್ರೀ ಮಲ್ಲಿಕಾರ್ಜುನಸ್ವಾಮಿ ದೇವಾಲಯ, ಬಸವನಗುಡಿ, ಬೆಂಗಳೂರು.
7. ಶ್ರೀ ಕಾರಂಜಿ ಆಂಜನೇಯಸ್ವಾಮಿ ದೇವಾಲಯ, ಬಸವನಗುಡಿ, ಬೆಂಗಳೂರು.
8. ಶ್ರೀ ಆಂಜನೇಯಸ್ವಾಮಿ ದೇವಾಲಯ, ಯಲಹಂಕ ಗೇಟ್, ಬೆಂಗಳೂರು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ನಾಗರತ್ನಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಮುಜರಾಯಿ)

**P.R. 340**
**S.C. 100**

## ಕಂದಾಯ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ, ಸಾಗರಟೌನ್ ಶ್ರೀ ಮಾರಿಕಾಂಬ ದೇವಸ್ಥಾನವನ್ನು ಅಧಿಸೂಚಿತ ಪಟ್ಟಿಗೆ ಸೇರಿಸುವ ಕುರಿತು.

**ಓದಲಾಗಿದೆ :** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಇವರ ಪತ್ರ ಸಂಖ್ಯೆ : ಎಡಿಎಂ/8/ಸಿಆರ್/84/2012-13, ದಿನಾಂಕ : 05-12-2013 ಮತ್ತು 25-11-2015.

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ದಿನಾಂಕ : 05-12-2013ರ ಪತ್ರದಲ್ಲಿ ಶಿವಮೊಗ್ಗ ಜಿಲ್ಲೆ, ಸಾಗರಟೌನ್ ಶ್ರೀ ಮಾರಿಕಾಂಬ ದೇವಾಲಯದ ಜಾತ್ರಾ ಸಮಿತಿಯವರು ಸಾರ್ವಜನಿಕರಿಂದ ವಂತಿಗೆ ಸಂಗ್ರಹಣೆ ಮಾಡಿ ಸರಿಯಾದ ರೀತಿಯಲ್ಲಿ ಲೆಕ್ಕ ಪತ್ರಗಳನ್ನು ನಿರ್ವಹಿಸದೇ ಹಣದ ದುರುಪಯೋಗ ಮಾಡುತ್ತಿದ್ದಾರೆ ಎಂಬ ಬಗ್ಗೆ ಶ್ರೀ ಎ.ಡಿ. ಸುಬ್ರಹ್ಮಣ್ಯರವರಿಂದ ಸ್ವೀಕೃತವಾದ ದೂರು ಅರ್ಜಿಯಲ್ಲಿನ ಆರೋಪಗಳ ಕುರಿತು ಅಪರ ಜಿಲ್ಲಾಧಿಕಾರಿಗಳು, ಶಿವಮೊಗ್ಗ. ಇವರು ವಿಚಾರಣೆ ನಡೆಸಿ, ವರದಿ ಸಲ್ಲಿಸಿರುತ್ತಾರೆ. ಸದರಿ ವರದಿಯಲ್ಲಿ ದೇವಾಲಯದಲ್ಲಿ 2001ನೇ ಸಾಲಿನಿಂದ 2009ನೇ ಸಾಲಿನವರೆಗೆ ನಡೆದ ಜಾತ್ರೆ ಲೆಕ್ಕ ಪತ್ರಗಳನ್ನು ಹಾಜರುಪಡಿಸಲು ದಿನಾಂಕ : 22-02-2011, 07-03-2011, 21-04-2011 ಮತ್ತು 14-09-2011 ರಂದು ತಿಳುವಳಿಕೆ ಪತ್ರ ನೀಡಲಾಗಿತ್ತು. ಆದರೆ ಸಮಿತಿಯವರು ಯಾವುದೇ ಮಾಹಿತಿ ನೀಡಿರುವುದಿಲ್ಲ. ಈವರೆವಿಗೂ ಜಾತ್ರೆಯ ಲೆಕ್ಕಪತ್ರಗಳು ಆಡಿಟ್ ಆಗಿ ಬಂದಿರುವುದಿಲ್ಲ. ಇದರಿಂದ ಲೆಕ್ಕ ಪತ್ರಗಳನ್ನು ನೀಡಲು ಸಾಧ್ಯವಿಲ್ಲವೆಂದು ಈ ಬಗ್ಗೆ ಸರ್ವ ಸದಸ್ಯರ ಸಭೆ ಕರೆದು ಅವರ ಒಪ್ಪಿಗೆ ಪಡೆದ ನಂತರ ಲೆಕ್ಕಪತ್ರಗಳನ್ನು ಹಾಜರುಪಡಿಸುವುದಾಗಿ ಜಾತ್ರಾ ಸಮಿತಿಯವರು ಬೇಜವಾಬ್ದಾರಿಯಾಗಿ ಸಾಗರ ತಹಶೀಲ್ದಾರ್‌ರವರಿಗೆ ಮೌಖಿಕವಾಗಿ ಉತ್ತರ ನೀಡಿರುತ್ತಾರೆ. ಇದು ಸಾರ್ವಜನಿಕರಿಗೆ ಮೇಲ್ನೋಟಕ್ಕೆ ಅನುಮಾನಗಳು ನಿಜವಾಗಿರುವಂತೆ ಕಂಡು ಬಂದಿದ್ದರಿಂದ ಈ ಸಮಿತಿ ಎಲ್ಲಾ ಲೆಕ್ಕಪತ್ರಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಜಾತ್ರಾ ಲೆಕ್ಕ ಪತ್ರಗಳನ್ನು ಜಪ್ತಿ ಮಾಡಬಹುದೆಂದು ಅಪರ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಇವರು ದೇವಾಲಯವನ್ನು ಇಲಾಖಾ ವಶಕ್ಕೆ ಪಡೆಯಲು ಶಿಫಾರಸ್ಸು ಮಾಡಿರುತ್ತಾರೆ.

ನಂತರ, ಆಯುಕ್ತಾಲಯದಿಂದ ಸದರಿ ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಇಲಾಖೆ ಕಾಯ್ದೆ 1997ರ ಸೆಕ್ಷನ್ 42 ಮತ್ತು 43ರನ್ವಯ ಘೋಷಿತ ಸಂಸ್ಥೆಯನ್ನಾಗಿ ಏಕೆ ಆದೇಶಿಸಬಾರದು ಎಂಬುದಕ್ಕೆ ಸಮಜಾಯಿಷಿಯನ್ನು ಒಂದು ತಿಂಗಳೊಳಗಾಗಿ ಸಲ್ಲಿಸಲು ಕಾರಣ ಕೇಳಿ ನೋಟೀಸನ್ನು ದಿನಾಂಕ : 07-10-2013ರಂದು ಸಂಸ್ಥೆಯ ಅಧ್ಯಕ್ಷರಿಗೆ ನೀಡಿದ್ದು, ಸಂಸ್ಥೆಯ ಪ್ರಧಾನ ಕಾರ್ಯದರ್ಶಿಯವರು ದಿನಾಂಕ : 28-10-2013ರಂದು ದೇವಾಲಯದ ಆಡಿಟ್ ವರದಿಗಳು ಮತ್ತು ಸಂಬಂಧಿಸಿದ ತಖ್ತೆಗಳನ್ನು ಸಂಪೂರ್ಣಗೊಳಿಸಿ ಹಾಜರುಪಡಿಸಲು ಎರಡು ತಿಂಗಳುಗಳ ಕಾಲಾವಕಾಶ ಕೋರಿರುತ್ತಾರೆ. ಆದಾಗ್ಯೂ ಸಮಿತಿಯು ಇದುವರೆಗೆ ಯಾವುದೇ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ ಎಂದು ತಿಳಿಸಿರುತ್ತಾರೆ.

ನಂತರ, ದಿನಾಂಕ : 22-09-2015ರಂದು ನಡೆದ 2ನೇ ರಾಜ್ಯ ಧಾರ್ಮಿಕ ಪರಿಷತ್ತಿನ 2ನೇ ಸಭೆಯಲ್ಲಿ ಸದರಿ ವಿಚಾರವನ್ನು ಮಂಡಿಸಲಾಗಿ, ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಸೆಕ್ಷನ್ 42 ಮತ್ತು 43 ರನ್ವಯ ಪ್ರಸ್ತಾಪಿತ ದೇವಾಲಯವನ್ನು ಘೋಷಿತ ಸಂಸ್ಥೆಯನ್ನಾಗಿ ಘೋಷಿಸಿ ಸರ್ಕಾರದ ವಶಕ್ಕೆ ಪಡೆಯುವ ಬಗ್ಗೆ ಅಧಿಸೂಚನೆ ಹೊರಡಿಸಲು ನಿರ್ಣಯಿಸಲಾಗಿರುತ್ತದೆ. ಆದುದರಿಂದ ಶಿವಮೊಗ್ಗ ಜಿಲ್ಲೆ, ಸಾಗರ ಟೌನ್ ಶ್ರೀ ಮಾರಿಕಾಂಬ ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಇಲಾಖೆ ಕಾಯ್ದೆ 1997ರ ಸೆಕ್ಷನ್ 42ರನ್ವಯ ಘೋಷಿತ ಸಂಸ್ಥೆಯೆಂದು ಆದೇಶ ಹೊರಡಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ದಿನಾಂಕ : 25-11-2015ರ ಪತ್ರದಲ್ಲಿ ಕೋರಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 03 ಮುಆಬಿ 2014, ಬೆಂಗಳೂರು, ದಿನಾಂಕ : 12-04-2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಸಾಗರ ಟೌನ್ ಶ್ರೀ ಮಾರಿಕಾಂಬ ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿ ಅಧಿನಿಯಮ 1997ರ ಅಧಿನಿಯಮ 42 ಮತ್ತು 43 ರನ್ವಯ ಘೋಷಿತ ಸಂಸ್ಥೆಯನ್ನಾಗಿ ಘೋಷಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ನಾಗರತ್ನಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಮುಜರಾಯಿ)

**P.R. 341**
**S.C. 100**

## ಕಂದಾಯ ಸಚಿವಾಲಯ

**ವಿಷಯ :** ಕಲಬುರಗಿ ಜಿಲ್ಲೆಯ ಚಿತ್ತಾಪೂರ ತಾಲ್ಲೂಕಿನ ಇಟಗಾ ಗ್ರಾಮದ ಸರಕಾರಿ ಸರ್ವೆ ನಂ. 100/2ರಲ್ಲಿ 05-05 ಎಕರೆ/ಗುಂಟೆ ಜಮೀನನ್ನು ಓರಿಯಂಟ್ ಸಿಮೆಂಟ್ ಕಂಪನಿ ಚಿತ್ತಾಪೂರ ಇವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು, ಕಲಬುರಗಿ ಇವರ ಪತ್ರ ಸಂಖ್ಯೆ : ಕಂ/ಭೂಮಿ-1/169/2015-16, ದಿನಾಂಕ : 16-10-2015.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 16–10–2015ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಕಲಬುರಗಿ ಇವರು ಕಲಬುರಗಿ ಜಿಲ್ಲೆ ಚಿತ್ತಾಪೂರ ತಾಲ್ಲೂಕಿನ ಇಟಗಾ ಗ್ರಾಮದ ಸರಕಾರಿ ಸರ್ವೆ ನಂಬರ್ 100/2ರಲ್ಲಿ 05.05 ಎಕರೆ/ಗುಂಟೆ ಸರ್ಕಾರಿ ಜಮೀನನ್ನು ಮೆಃ ಓರಿಯಂಟ್ ಸಿಮೆಂಟ್ ಲಿಮಿಟೆಡ್, ಚಿತ್ತಾಪೂರ ಇವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಕುರಿತು ಪ್ರಸ್ತಾಪಿಸಿರುತ್ತಾರೆ.

ಓರಿಯಂಟ್ ಸಿಮೆಂಟ್ ಲಿಮಿಟೆಡ್, ಚಿತ್ತಾಪೂರ ಇವರು ದಿನಾಂಕ : 04–08–2015ರಂದು ಜಿಲ್ಲಾಧಿಕಾರಿಗಳಿಗೆ ಮನವಿಯನ್ನು ಸಲ್ಲಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 34 ಎಲ್‌ಆರ್‌ಎಂ 2009, ದಿನಾಂಕ : 24–10–2009ರಂತೆ ಸಿಮೆಂಟ್ ಉತ್ಪಾದನೆ ಘಟಕ ಸ್ಥಾಪಿಸುವ ಸಲುವಾಗಿ ಖಾಸಗಿಯವರಿಂದ ಜಮೀನು ಖರೀದಿ ಮಾಡಲಾಗಿರುತ್ತದೆ. ಇಟಗಿ ಗ್ರಾಮದ ಸ.ನಂ. 100/2ರಲ್ಲಿನ 5.05 ಎಕರೆ ಸರ್ಕಾರಿ ಜಮೀನು ಕಂಪನಿಯು ಖರೀದಿಸಿರುವ ಖಾಸಗಿ ಜಮೀನುಗಳ ಮಧ್ಯದಲ್ಲಿ ಬರುತ್ತಿರುವುದರಿಂದ ಸದರಿ ಜಮೀನನ್ನು ಕೈಗಾರಿಕಾ ಉದ್ದೇಶಕ್ಕಾಗಿ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಬೇಕೆಂದು ಕೋರಿರುತ್ತಾರೆ.

ಕಲಬುರಗಿ ಜಿಲ್ಲೆ ಚಿತ್ತಾಪೂರ ತಾಲ್ಲೂಕಿನ ಇಟಗಾ ಗ್ರಾಮದ ಸರ್ಕಾರಿ ಖಾರಿಜ ಖಾತಾ ಸ.ನಂ. 100ರ ಜಮೀನಿನ 1953–54 ರಿಂದ 1992–93ರ ವರೆಗೆ ಪಹಣಿಯಲ್ಲಿ ಸರ್ಕಾರಿ ಖಾರಿಜ ಖಾತ ಎಂದು ದಾಖಲಾಗಿದ್ದು, 1993–94ನೇ ಸಾಲಿನ ಪಹಣಿ ಪತ್ರಿಕೆಯಲ್ಲಿ 1) ಅನುಸಾಬಾಯಿ ಗಂಡ ಕೃಷ್ಣ 04–38 ಎ/ಗುಂ 2) ಸರುಬಾಯಿ ಗಂಡ ಮಾರುತಿ 04–38 ಎ/ಗುಂ 3) ಯಂಕಣ್ಣ ತಂದೆ ಕಾಶಪ್ಪ ಡಿಗ್ಗಿ 04–38 ಎ/ಗುಂ ಜಮೀನು ಇವರ ಹೆಸರಿಗೆ ನಮೂದಾಗಿದ್ದು, ನಂತರ 2013–14ನೇ ಸಾಲಿನ ಪಹಣಿ ಪತ್ರಿಕೆಯಲ್ಲಿ ಅನುಸಾಬಾಯಿ ಗಂಡ ಕೃಷ್ಣ 3–38 ಎ/ಗುಂ ಹಾಗೂ ಅಂಬುಬಾಯಿ ಗಂಡ ಶಿವಾಜಿ ಇವರ ಹೆಸರುಗಳು ನಮೂದಾಗಿದ್ದು, ತಹಶೀಲ್ದಾರರು ಚಿತ್ತಾಪೂರ ಇವರ ಆದೇಶ ಸಂಖ್ಯೆ : ಕಂ/ಭೂಮಿ/40/2015–16, ದಿನಾಂಕ: 08–09–2015ರ ಪ್ರಕಾರ ಪಹಣಿಯಲ್ಲಿ ಹೆಸರನ್ನು ತೆಗೆದು ಹಾಕಲಾಗಿರುತ್ತದೆ. ಚಿತ್ತಾಪೂರ ಕಿರಿಯ ನ್ಯಾಯಾಲಯದಲ್ಲಿ "Suit for perpetual injuction" ಸಲುವಾಗಿ ಶ್ರೀ ಯಂಕಪ್ಪ ತಂದೆ ಕಾಶಪ್ಪ ಡಿಗ್ಗಿ ಇವರು ಒ.ಎಸ್.ನಂ. 15/2015ರ ಪ್ರಕಾರ ದಾವೆ ಹಾಕಿರುತ್ತಾರೆ. ಉಚ್ಚ ನ್ಯಾಯಾಲಯ ಸಂಚಾರಿ ಪೀಠ ಕಲಬುರಗಿಯಲ್ಲಿ ರಿಟ್ ಅರ್ಜಿ ಸಂಖ್ಯೆ : 2044997/2015, ದಿನಾಂಕ : 09–09–2015ರಲ್ಲಿ ದಾವೆ ಹೂಡಿದ್ದು, ಸದರಿ ದಾವೆಗೆ ಸಂಬಂಧಪಟ್ಟಂತೆ ನ್ಯಾಯಾಲಯದಿಂದ ತಡೆಯಾಜ್ಞೆ ನೀಡಿರುವ ಬಗ್ಗೆ ಯಾವುದೇ ಮಾಹಿತಿ ಬಂದಿರುವುದಿಲ್ಲವೆಂದು ತಹಶೀಲ್ದಾರ್‌ರವರು ವರದಿ ಮಾಡಿರುತ್ತಾರೆ. ಸ.ನಂ. 100/1 ರಲ್ಲಿನ ಜಮೀನು ಮಾತ್ರ ನ್ಯಾಯಾಲಯದಲ್ಲಿ ತಕರಾರುಗಳು ಇರುತ್ತವೆ. ಸ.ನಂ. 100/2 ರಲ್ಲಿನ ಜಮೀನು ಆರ್‌ಟಿಸಿಯ ಕಲಂ 9ರಲ್ಲಿ **"ಖಾರಿಜಖಾತಾ ಸರಕಾರಿ"** ಎಂದು ದಾಖಲಾಗಿದ್ದು, ಒಟ್ಟು ವಿಸ್ತೀರ್ಣ 05.05 ಎಕರೆ ಇದ್ದು, ಈ ಜಮೀನಿಗೆ ಸಂಬಂಧಪಟ್ಟಂತೆ ನ್ಯಾಯಾಲಯದಲ್ಲಿ ಯಾವುದೇ ತಕರಾರುಗಳು ಇರುವುದಿಲ್ಲವೆಂದು ಜಿಲ್ಲಾಧಿಕಾರಿಗಳ ವರದಿಯಲ್ಲಿ ತಿಳಿಸಲಾಗಿದೆ.

ಮೆಃ ಓರಿಯಂಟ್ ಸಿಮೆಂಟ್, ಹೈದರಾಬಾದ್ ಇವರಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 34 ಎಲ್‌ಆರ್‌ಎಂ 2009, ದಿನಾಂಕ: 24–10–2009ರಲ್ಲಿ ಕಲಬುರಗಿ ಜಿಲ್ಲೆಯ, ಚಿತ್ತಾಪೂರ ತಾಲ್ಲೂಕಿನ ಇಟಗಾ, ಮೊಗಲಾ ಮತ್ತು ದಿಗ್ಗಾಂವ್ ಗ್ರಾಮಗಳ ವಿವಿಧ ಸ.ನಂ. ಒಟ್ಟು 1475 ಎಕರೆ ಕೃಷಿ ಜಮೀನನ್ನು ಸಿಮೆಂಟ್ ಉತ್ಪಾದನೆ ಘಟಕ ಸ್ಥಾಪಿಸುವ ಉದ್ದೇಶಕ್ಕಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರಡಿ ಸರ್ಕಾರದ ಅನುಮತಿ ನೀಡಲಾಗಿರುತ್ತದೆ.

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಆದೇಶ ಸಂಖ್ಯೆ : ಸಿಐ 60 ಎಸ್‌ಪಿಐ 2009, ದಿನಾಂಕ : 09–01–2014ರಲ್ಲಿ ಮೆಃ ಓರಿಯಂಟ್ ಸಿಮೆಂಟ್, ಹೈದರಾಬಾದ್ ಇವರಿಗೆ ಈ ಯೋಜನೆಯನ್ನು ಜಾರಿಗೊಳಿಸಲು ಎರಡು ವರ್ಷಗಳ ಅವಧಿಗೆ ಕಾಲಾವಕಾಶ ವಿಸ್ತರಣೆ ಮಾಡಲಾಗಿರುತ್ತದೆ.

ಉಪನೋಂದಣಾಧಿಕಾರಿಗಳು, ಚಿತ್ತಾಪೂರ ಇವರು ಪ್ರಸ್ತಾಪಿತ ಜಮೀನಿನ ಮಾರುಕಟ್ಟೆ ಬೆಲೆ ₹. 6,00,000/– ಗಳಿರುವುದಾಗಿ ವರದಿ ಮಾಡಿರುತ್ತಾರೆ. ಸದರಿ ಜಮೀನು ಚಿತ್ತಾಪೂರ ನಗರದಿಂದ 7 ಕಿ.ಮೀ ಅಂತರದಲ್ಲಿರುತ್ತದೆ.

ಜಿಲ್ಲಾಧಿಕಾರಿಗಳು, ಕಲಬುರಗಿ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 34 ಎಲ್‌ಜಿಜಿ 2015, ಬೆಂಗಳೂರು, ದಿನಾಂಕ : 27–04–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕಲಬುರಗಿ ಜಿಲ್ಲೆ, ಚಿತ್ತಾಪುರ ತಾಲ್ಲೂಕಿನ ಇಟಗಾ ಗ್ರಾಮದ ಸರ್ಕಾರಿ ಸರ್ವೆ ನಂ. 100/2ರಲ್ಲಿ 5–05 ಎಕರೆ/ಗುಂಟೆ ಸರ್ಕಾರಿ ಜಮೀನನ್ನು ಓರಿಯಂಟ್ ಸಿಮೆಂಟ್, ಚಿತ್ತಾಪೂರ ಇವರಿಗೆ ಸಿಮೆಂಟ್ ಉತ್ಪಾದನಾ ಘಟಕ ಸ್ಥಾಪಿಸುವ ಉದ್ದೇಶಕ್ಕಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 22ಎ(1)ರನ್ವಯ ಮಾರುಕಟ್ಟೆ ದರದ ಶೇ.10ರಷ್ಟು ದರ ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ, ಪ್ರತಿ ವರ್ಷ ಶೇ.10ರಷ್ಟು ಗುತ್ತಿಗೆ ದರವನ್ನು ಹೆಚ್ಚಿಸುವ ಷರತ್ತಿಗೊಳಪಟ್ಟು 30 ವರ್ಷಗಳ ಅವಧಿಗೆ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿ ಆದೇಶಿಸಿದೆ.

ಷರತ್ತುಗಳು :–

1. ಉದ್ದೇಶಿತ ಜಮೀನನ್ನು ಯಾವ ಉದ್ದೇಶಕ್ಕಾಗಿ ಗುತ್ತಿಗೆ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.
2. ಪ್ರಸ್ತಾಪಿತ ಜಮೀನು ಸಂಸ್ಥೆಗೆ ಅವಶ್ಯವಿಲ್ಲದಿದ್ದರೆ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
3. ಸದರಿ ಜಮೀನನ್ನು ಗುತ್ತಿಗೆ ನೀಡಿದ ದಿನಾಂಕದಿಂದ 2 ವರ್ಷದ ಒಳಗಾಗಿ ಉಪಯೋಗಿಸತಕ್ಕದ್ದು.
4. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
5. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
6. ಸದರಿ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ನೋಡಿಕೊಳ್ಳತಕ್ಕದ್ದು.

7. ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿರುವ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಗುತ್ತಿಗೆ/ಉಪಗುತ್ತಿಗೆ ನೀಡಿರುವುದಾಗಲೀ, ಅಡಮಾನ ವರ್ಗಾವಣೆ ಇತರೆ ರೀತಿಯ ಪರಭಾರೆ ಮಾಡತಕ್ಕದ್ದಲ್ಲ.
8. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಸರ್ಕಾರದ ವಶಕ್ಕೆ ಪಡೆಯಲಾಗುವುದು.
9. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 342

**ರೇವಯ್ಯ**

S.C. 25

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ. (ಭೂ ಮಂಜೂರಾತಿ–3)

## ಕಂದಾಯ ಸಚಿವಾಲಯ

**ವಿಷಯ :** ಮೆ: ಶ್ರೀ ಸಿಮೆಂಟ್ಸ್ ಲಿ., ರಾಜಾಸ್ಥಾನ ಇವರಿಗೆ ಕಲಬುರಗಿ ಜಿಲ್ಲೆ, ಸೇಡಂ ತಾಲ್ಲೂಕು, ಕೋಡ್ಲಾ ಹಾಗೂ ಬೆನಕನಹಳ್ಳಿ ಗ್ರಾಮಗಳಲ್ಲಿ 242.38 ಎಕರೆ ಸರ್ಕಾರಿ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
(1) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 48 ಎಲ್ಆರ್ಎಂ 2011, ದಿನಾಂಕ: 30–08–2011.
(2) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 101 ಎಲ್ಆರ್ಎಂ 2011, ದಿನಾಂಕ: 07–01–2012.
(3) ಸಹಾಯಕ ಆಯುಕ್ತರು, ಸೇಡಂ ಇವರ ಆದೇಶ ಸಂಖ್ಯೆ: ಕಂಇ ಬಿಶೇ/44/12–13 ಹಾಗೂ ಸಂಖ್ಯೆ: ಕಂ/ಭೂಸು/307/12–13, ದಿನಾಂಕ: 09–11–2012.
(4) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 24 ಎಲ್ಆರ್ಎಂ 2013 (ಭಾ–1), ದಿನಾಂಕ: 12–08–2014.
(5) ಮೆ: ಶ್ರೀ ಸಿಮೆಂಟ್ಸ್ ಲಿ., ರಾಜಾಸ್ಥಾನ ಇವರ ಪತ್ರ ಸಂಖ್ಯೆ: SCL/BWR/KAR/LAND-242A/2015, ದಿನಾಂಕ: 06–04–2015.
(6) ಜಿಲ್ಲಾಧಿಕಾರಿ, ಕಲಬುರಗಿ ಇವರ ಪತ್ರ ಸಂಖ್ಯೆ: ಕಂ/ಡಿಸಿಕ/ಭೂಸು/24/10–11, ದಿನಾಂಕ: 22–09–2015.

**ಪ್ರಸ್ತಾವನೆ :**

ಮೆ: ಶ್ರೀ ಸಿಮೆಂಟ್ಸ್ ಲಿ., ರಾಜಾಸ್ಥಾನ ಇವರಿಗೆ ಕಲಬುರಗಿ ಜಿಲ್ಲೆಯ ಸೇಡಂ ತಾಲ್ಲೂಕು, ಬೆನಕನಹಳ್ಳಿ ಹಾಗೂ ಕೋಡ್ಲಾ ಗ್ರಾಮಗಳಲ್ಲಿ ಸಿಮೆಂಟ್ ಉತ್ಪಾದನೆ ಘಟಕ ಸ್ಥಾಪಿಸುವ ಸಲುವಾಗಿ ರೈತರಿಂದ ಜಮೀನನ್ನು ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ ಕಲಂ 109(1ಎ)ರಲ್ಲಿ ದಿನಾಂಕ: 30–08–2011 ಮತ್ತು 07–01–2012ರಂದು ಮೇಲೆ ಓದಲಾದ (1) ಮತ್ತು (2)ರಲ್ಲಿ ಹೊರಡಿಸಿರುವ ಎರಡು ಸರ್ಕಾರಿ ಅಧಿಸೂಚನೆಗಳಲ್ಲಿ ಕ್ರಮವಾಗಿ 1000 ಎಕರೆ ಮತ್ತು 360 ಎಕರೆ ಒಟ್ಟು 1360 ಎಕರೆಗೆ ಅನುಮತಿ ನೀಡಲಾಗಿತ್ತು. ಸದರಿ ಕಂಪನಿಯವರು ಖರೀದಿಸಲಾದ ಜಮೀನುಗಳು ಕರ್ನಾಟಕ ಭೂ ಸುಧಾರಣೆ ಕಾಯ್ದೆಯ ಕಲಂ 79ಎ ಮತ್ತು 79ಬಿ ಉಲ್ಲಂಘನೆಯಾಗಿವೆ ಎಂದು ಅದೇ ಕಾಯ್ದೆಯ ಕಲಂ 83 ಹಾಗೂ ಕರ್ನಾಟಕ ಭೂ ಸುಧಾರಣೆ ನಿಯಮಗಳು, 1974ರ ನಿಯಮ 37ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕಂಪನಿಯ ಪರವಾಗಿ ಖರೀದಿಸಿದ ಕ್ರಯಪತ್ರಗಳೆಲ್ಲವೂ ಅಸಿಂಧು ಮತ್ತು ಅಮಾನ್ಯವೆಂದು ಘೋಷಿಸಿ ಒಟ್ಟು ಕ್ಷೇತ್ರ 1106 ಎಕರೆ ಜಮೀನುಗಳನ್ನು ಯಾವುದೇ ಋಣಭಾರವಿಲ್ಲದೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಪಹಣಿಯಲ್ಲಿ ಕರ್ನಾಟಕ ಸರ್ಕಾರ ಎಂದು ಬದಲಾವಣೆ ಮಾಡಿ ಸರ್ಕಾರದ ವಶಕ್ಕೆ ತೆಗೆದುಕೊಳ್ಳಲು ಸಹಾಯಕ ಆಯುಕ್ತರು, ಸೇಡಂರವರು ದಿನಾಂಕ: 09–11–2012ರಲ್ಲಿ ಮೇಲೆ ಓದಲಾದ (3)ರಲ್ಲಿ ಆದೇಶದಲ್ಲಿ ಆದೇಶಿಸಿರುತ್ತಾರೆ. ಮುಂದುವರೆದು ಸೇಡಂ ತಾಲ್ಲೂಕಿನ ಬೆನಕನಹಳ್ಳಿ ಹಾಗೂ ಕೋಡ್ಲಾ ಗ್ರಾಮಗಳಲ್ಲಿ ಬೇನಾಮಿ ಹೆಸರಿನಲ್ಲಿ ಖರೀದಿ ಮಾಡಿದ ಒಟ್ಟು 242–38 ಎಕರೆ ಜಮೀನುಗಳು 79ಎ ಮತ್ತು 79ಬಿ ಉಲ್ಲಂಘನೆಯಾಗಿರುವುದರಿಂದ ಸದರಿ ಜಮೀನುಗಳನ್ನು ಯಾವುದೇ ಋಣಭಾರವಿಲ್ಲದೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸಹಾಯಕ ಆಯುಕ್ತರು, ಸೇಡಂ ಇವರು ಆದೇಶ ಮಾಡಿರುತ್ತಾರೆಂದು ಜಿಲ್ಲಾಧಿಕಾರಿಗಳು, ಕಲಬುರಗಿ ಇವರು ದಿನಾಂಕ: 27–05–2015ರಂದು ಸರ್ಕಾರಕ್ಕೆ ಬರೆದ ಪತ್ರದಲ್ಲಿ ತಿಳಿಸಿರುತ್ತಾರೆ.

ಮೇಲೆ ಓದಲಾದ (4)ರ ಸರ್ಕಾರದ ಅಧಿಸೂಚನೆಯಲ್ಲಿ ಕಲಬುರಗಿ ಜಿಲ್ಲೆಯ ಸೇಡಂ ತಾಲ್ಲೂಕಿನ ಬೆನಕನಹಳ್ಳಿ ಹಾಗೂ ಕೋಡ್ಲಾ ಗ್ರಾಮಗಳಲ್ಲಿ 1106 ಎಕರೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದ ಸರ್ಕಾರಿ ಜಮೀನನ್ನು ಕರ್ನಾಟಕ ಭೂ ಮಂಜೂರಾಗಿ ನಿಯಮಗಳು, 1969ರ ನಿಯಮ 27ನ್ನು ಚಲಾಯಿಸಿ ಹಾಗೂ ಸದರಿ ನಿಯಮಗಳ ನಿಯಮ 22ನ್ನು ಓದಿಕೊಂಡಂತೆ ಸಾಂಕೇತಿಕವಾಗಿ ಎಕರೆ ಒಂದಕ್ಕೆ ರೂ. 10,000/–ಗಳನ್ನು ವಿಧಿಸಿ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮೆ: ಶ್ರೀ ಸಿಮೆಂಟ್ಸ್ ಲಿ., ರಾಜಾಸ್ಥಾನ ಇವರಿಗೆ ಸಿಮೆಂಟ್ ಉತ್ಪಾದನಾ ಘಟಕ ಸ್ಥಾಪಿಸಲು ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 24 ಎಲ್ಆರ್ಎಂ 2013 (ಭಾಗ–1) ದಿನಾಂಕ: 12–08–2014ರಲ್ಲಿ ಹೊರಡಿಸಲಾಗಿದೆ.

ಮೇಲೆ ಓದಲಾದ (5)ರ ಪತ್ರದಲ್ಲಿ ಈ ಸಿಮೆಂಟ್ ಉತ್ಪಾದನಾ ಘಟಕಕ್ಕೆ ಸುಮಾರು ₹.1,500 ಕೋಟಿ ಬಂಡವಾಳವನ್ನು ಕಂಪನಿಯು ಹೂಡಿದ್ದು, ಪ್ರಸ್ತಾವಿತ ಸಿಮೆಂಟ್ ಉತ್ಪಾದನಾ ಘಟಕದ ಮಧ್ಯಭಾಗದಲ್ಲಿ ಇರುವ 242–38 ಎಕರೆ ಜಮೀನನ್ನು ಹೊಂದದೇ ಉತ್ಪಾದನಾ ಘಟಕವನ್ನು ಪ್ರಾರಂಭಿಸಲು ಕಷ್ಟಸಾಧ್ಯವೆಂದು ಮೆ: ಶ್ರೀ ಸಿಮೆಂಟ್ ಲಿ., ರಾಜಾಸ್ಥಾನ ರವರು ತಿಳಿಸುತ್ತಾ ಸದರಿ ಜಮೀನನ್ನು ಈ ಹಿಂದೆ ಜಮೀನು ಮಂಜೂರು ಮಾಡಲಾಗಿದ್ದ ಷರತ್ತುಗಳನ್ವಯ ಮಂಜೂರು ಮಾಡಲು ಕೋರಿರುತ್ತಾರೆ.

ಮೇಲೆ ಓದಲಾದ (6)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಕಲಬುರಗಿ ಇವರು ಸದರಿ ಕಂಪನಿಯವರು ಪ್ರಸ್ತಾವಿತ ಸಿಮೆಂಟ್ ಘಟಕ ಸ್ಥಾಪನೆಗಾಗಿ 242–38 ಎಕರೆ ಸರ್ಕಾರಿ ಜಮೀನು ಇದೆಯೆಂದು ತಿಳಿಸುತ್ತಾ, ಸದರಿ 242–38 ಎಕರೆ ಸರ್ಕಾರಿ ಜಮೀನನ್ನು ಮೆ: ಶ್ರೀ ಸಿಮೆಂಟ್ಸ್ ಲಿ., ರಾಜಾಸ್ಥಾನ ರವರಿಗೆ ಗುತ್ತಿಗೆ ಆಧಾರದ ಮೇಲೆ ನೀಡಬಹುದೆಂದು ಸಹಾಯಕ ಆಯುಕ್ತರು, ಸೇಡಂ ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ ಎಂದು ತಿಳಿಸುತ್ತಾ ಕಲಬುರಗಿ ಜಿಲ್ಲೆಯ ಸೇಡಂ ತಾಲ್ಲೂಕಿನ ಕೋಡ್ಲಾ ಹಾಗೂ ಬೆನಕನಹಳ್ಳಿ ಗ್ರಾಮಗಳ ವಿವಿಧ ಸರ್ವೇ ನಂಬರ್‌ಗಳ ಒಟ್ಟು 242–38 ಎ/ಗುಂ ಜಮೀನು ಶ್ರೀ ಸಿಮೆಂಟ್ ಕಂಪನಿಯವರಿಗೆ ಗುತ್ತಿಗೆ ಆಧಾರದ ಮೇಲೆ ಇಲ್ಲವೇ ಭೂ ಮಂಜೂರಾತಿ ಮಾಡಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಹಿಂದೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ 1106 ಎಕರೆ ಸರ್ಕಾರಿ ಜಮೀನುಗಳನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 27ನ್ನು ಚಲಾಯಿಸಿ ಹಾಗೂ ಸದರಿ ನಿಯಮಗಳ ನಿಯಮ 22ಅನ್ನು ಓದಿಕೊಂಡಂತೆ ಸಾಂಕೇತಿಕವಾಗಿ ಎಕರೆ ಒಂದಕ್ಕೆ ₹. 10,000/– (ರೂಪಾಯಿ ಹತ್ತು ಸಾವಿರಗಳು ಮಾತ್ರ)ಗಳನ್ನು ವಿಧಿಸಿ 30 ವರ್ಷಗಳ ಅವಧಿಗೆ ಗುತ್ತಿಗೆ ನೀಡಲು ಅನುಮತಿಸಿದಂತೆ ಪ್ರಸ್ತುತ ಕಲಬುರಗಿ ಜಿಲ್ಲೆ ಸೇಡಂ ತಾಲ್ಲೂಕು, ಕೋಡ್ಲಾ ಹಾಗೂ ಬೆನಕನಹಳ್ಳಿ ಗ್ರಾಮಗಳಲ್ಲಿನ 242.38 ಎಕರೆ ಜಮೀನುಗಳಿಗೂ ಅನ್ವಯಿಸಬೇಕೆಂದು ನಿರ್ಣಯಿಸಿ, ಮೆ: ಶ್ರೀ ಸಿಮೆಂಟ್ಸ್ ಲಿ., ರಾಜಾಸ್ಥಾನ ಇವರಿಗೆ ಸಿಮೆಂಟ್ ಪ್ಲಾಂಟ್ ಉತ್ಪಾದನಾ ಘಟಕ ಸ್ಥಾಪಿಸಲು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ ಸರ್ಕಾರಿ ಜಮೀನುಗಳನ್ನು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 60 ಎಲ್‌ಆರ್‌ಎಂ 2015, ಬೆಂಗಳೂರು, ದಿನಾಂಕ: 01–04–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕಲಬುರಗಿ ಜಿಲ್ಲೆ, ಸೇಡಂ ತಾಲ್ಲೂಕು, ಕೋಡ್ಲಾ ಹಾಗೂ ಬೆನಕನಹಳ್ಳಿ ಗ್ರಾಮಗಳಲ್ಲಿನ ಒಟ್ಟು 242.38 ಎಕರೆ ಜಮೀನುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವಂತಹ ಸರ್ಕಾರಿ ಜಮೀನುಗಳನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು 1969ರ ನಿಯಮ 27ನ್ನು ಚಲಾಯಿಸಿ ಅದೇ ನಿಯಮ 22ರಲ್ಲಿಯಂತೆ ಸಾಂಕೇತಿಕವಾಗಿ ಎಕರೆ ಒಂದಕ್ಕೆ ₹. 10,000/– (ರೂಪಾಯಿ ಹತ್ತು ಸಾವಿರಗಳು ಮಾತ್ರ)ಗಳನ್ನು ವಿಧಿಸಿ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸುವ ಷರತ್ತಿಗೊಳಪಡಿಸಿ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಸದರಿ ಜಮೀನುಗಳನ್ನು ಮೆ: ಶ್ರೀ ಸಿಮೆಂಟ್ಸ್ ಲಿ., ರಾಜಾಸ್ಥಾನ ಇವರಿಗೆ ಸಿಮೆಂಟ್ ಉತ್ಪಾದನಾ ಘಟಕ ಸ್ಥಾಪಿಸಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಮಂಜೂರು ಮಾಡಿ ಆದೇಶಿಸಿದೆ.

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಮಂಜೂರಾತಿ ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು, ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.

3) ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.

4) ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.

5) ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

6) ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ ಗುತ್ತಿಗೆ/ಉಪಗುತ್ತಿಗೆಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರರೆ ಯಾವುದೇ ರೀತಿಯ ಪರಭಾರಿಯನ್ನು ಮಾಡಬಾರದು.

7) ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

8) ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೆ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

9) ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 999 ವೆಚ್ಚ–7/2015, ದಿನಾಂಕ: 29–12–2015ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಾಲರಾಜ ದೇವರಖದ್ರಾ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಸುಧಾರಣೆ)

P.R. 345
SC – 20

## ಕಂದಾಯ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು, ಕಸಬಾ ಹೋಬಳಿ, ಯಲಗಳಲೆ ಗ್ರಾಮದ ವಿವಿಧ ಸರ್ವೆ ನಂಬರುಗಳಲ್ಲಿ ಒಟ್ಟು 18–00 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತ, ಶಿವಮೊಗ್ಗ ಇವರಿಗೆ ಕೈಗಾರಿಕಾ ವಸಾಹತು ಸ್ಥಾಪಿಸುವ ಉದ್ದೇಶಕ್ಕೆ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ (2) ಎಸ್‌ಆರ್–11/14–15(4572/14–15), ದಿನಾಂಕ: 14–05–2015.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ ಇವರು ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು, ಕಸಬಾ ಹೋಬಳಿ ಯಲಗಳಲೆ ಗ್ರಾಮದ ಸ.ನಂ. 64ರಲ್ಲಿ 12–32 ಎಕರೆ/ಗುಂಟೆ ಹಾಗೂ ಸ.ನಂ. 65ರಲ್ಲಿ 5–08 ಎಕರೆ/ಗುಂಟೆ ಒಟ್ಟು 18–00 ಎಕರೆ ಜಮೀನನ್ನು ಕೈಗಾರಿಕಾ ವಸಾಹತು ಸ್ಥಾಪಿಸುವ ಉದ್ದೇಶಕ್ಕೆ ಮಂಜೂರು ಮಾಡುವ ಕುರಿತು ಪ್ರಸ್ತಾಪಿಸಿದ್ದಾರೆ.

ಮುಂದುವರೆದು, ಉಪವಿಭಾಗಾಧಿಕಾರಿ, ಸಾಗರ ಉಪ ವಿಭಾಗ, ಸಾಗರ ಇವರ ವರದಿಯಂತೆ ಪ್ರಸ್ತಾಪಿತ ಜಮೀನು ಈಗಾಗಲೇ ಮುಖ್ಯ ಅರಣ್ಯ ಅಧಿಕಾರಿಗಳು, ಮೈಸೂರು ಕಾಗದ ಕಾರ್ಖಾನೆ (ಎಂ.ಪಿ.ಎಂ) ಸಾಗರವರಿಗೆ 40 ವರ್ಷಗಳ ಅವಧಿಗೆ ಗುತ್ತಿಗೆಗೆ ನೀಡಿದ್ದು, ಯಲಗಳಲೆ ಗ್ರಾಮದ ಸ.ನಂ.64ರಲ್ಲಿ 18–02 ಎಕರೆ/ಗುಂಟೆ ಮತ್ತು ಸ.ನಂ.65ರಲ್ಲಿ 20–06 ಎಕರೆ/ಗುಂಟೆ ಪ್ರದೇಶವು ಆರ್.ಟಿ.ಸಿ. ಪ್ರಕಾರ ಸರ್ಕಾರಿ ಬಂಜರು ಪ್ರದೇಶವಾಗಿರುತ್ತದೆ. ಈ ಪ್ರದೇಶದಲ್ಲಿ ಎಂ.ಪಿ.ಎಂ. ವತಿಯಿಂದ ನಡುತೋಪು ಬೆಳೆಸಲಾಗಿದೆ. ಇದರಲ್ಲಿ 18–00 ಎಕರೆ ಪ್ರದೇಶವು ಖಾಲಿಯಿರುತ್ತದೆ. ಸದರಿ ಪ್ರದೇಶವು ಡೀಮ್ಡ್ ಫಾರೆಸ್ಟ್ ಅಥವಾ ಮೀಸಲು ಅರಣ್ಯ ಪ್ರದೇಶಕ್ಕೆ ಒಳಪಟ್ಟಿರುವುದಿಲ್ಲ. ಖಾಲಿಯಿರುವ ಸದರಿ 18–00 ಎಕರೆ ಪ್ರದೇಶದಲ್ಲಿ ಸಣ್ಣ ಬಿದಿರು ಮೆಳೆಗಳು ಹಾಗೂ ಒಂದು ಪೈನಸ್ ಜಾತಿ ಮರ ಇರುತ್ತದೆ. ಈ ಖಾಲಿಯಿರುವ ಪ್ರದೇಶವನ್ನು ಕೈಗಾರಿಕಾ ವಸಾಹತು ಸ್ಥಾಪನೆಯ ಉದ್ದೇಶಕ್ಕೆ ವಾಪಸ್ಸು ನೀಡಲು ಅಭ್ಯಂತರವಿಲ್ಲವೆಂದು ಮುಖ್ಯ ಅರಣ್ಯ ಅಧಿಕಾರಿ, ಎಂ.ಪಿ.ಎಂ. ಸಾಗರ ವಿಭಾಗ, ಸಾಗರ ಇವರು ತಿಳಿಸಿರುತ್ತಾರೆ.

ಅದರಂತೆ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತ, ಶಿವಮೊಗ್ಗ ರವರು ಯಲಗಳಲೆ ಗ್ರಾಮದ ಸ.ನಂ. 64 ಮತ್ತು 65ರಲ್ಲಿ 18–00 ಎಕರೆ ಜಮೀನನ್ನು ಕೈಗಾರಿಕಾ ವಸಾಹತು ಸ್ಥಾಪನೆಗೆ ಸರ್ಕಾರಿ ಜಮೀನನ್ನು ಹಂಚಿಕೆ ಮಾಡುವಂತೆ ಕೋರಿರುತ್ತಾರೆ.

ಮುಂದುವರೆದು, ಯಲಗಳಲೆ ಗ್ರಾಮದಲ್ಲಿ ಒಟ್ಟು 466 ಜಾನುವಾರುಗಳಿದ್ದು, ಸದರಿ ಜಾನುವಾರುಗಳಿಗೆ ಅನುಗುಣವಾಗಿ ಒಟ್ಟು 470–01 ಎಕರೆ ಗೋಮಾಳ, ಇನ್ನಿತರೆ ಸರ್ಕಾರಿ ಭೂಮಿ 287–17 ಎಕರೆ ಇದ್ದು, ಈ ಸರ್ವೆ ನಂಬರ್‌ಗಳಿಗೆ ನಮೂನೆ 50, 53ರಡಿ ಕ್ರಮವಾಗಿ 5 ಮತ್ತು 24 ಅರ್ಜಿಗಳು ದಾಖಲಾಗಿದ್ದು, ಪ್ರಸ್ತಾಪಿತ ಪ್ರದೇಶ ಸಾಗರ ನಗರ ಸಭೆ ಸರಹದ್ದಿನಿಂದ 3 ಕಿ.ಮೀ. ಅಂತರದಲ್ಲಿರುವ ಕಾರಣ ಬಗರ್‌ಹುಕುಂದಾರರಿಗೆ ಮಂಜೂರಾತಿಗೆ ಅವಕಾಶವಿರುವುದಿಲ್ಲ ಹಾಗೂ ಕರ್ನಾಟಕ ಭೂಮಂಜೂರಾತಿ ನಿಯಮಗಳು, 1969ರ ನಿಯಮ 10(2)(iv)ರ ಪ್ರಕಾರ ನಗರ ಸಭೆಯ 3 ಕಿ.ಮೀ. ವ್ಯಾಪ್ತಿಯೊಳಗೆ ಬರುವ ಜಮೀನನ್ನು ಮಂಜೂರು ಮಾಡಲು ಅವಕಾಶವಿರುವುದಿಲ್ಲ. ಆದಾಗ್ಯೂ, ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತ, ಶಿವಮೊಗ್ಗ ಸಂಸ್ಥೆಯು ರಾಜ್ಯ ಸರ್ಕಾರದ ಉದ್ದಿಮೆಯಾಗಿದ್ದು, ಕೈಗಾರಿಕಾ ವಸಾಹತನ್ನು ಸ್ಥಾಪಿಸುವ ಉದ್ದೇಶವಿದ್ದು, ಅದರಿಂದಾಗಿ ಉದ್ಯೋಗ ಸೃಜನೆಯಾಗಲಿದ್ದು, ಸಾರ್ವಜನಿಕರಿಗೆ ಅನುಕೂಲವಾಗುತ್ತದೆ.

ಆದುದರಿಂದ ಪ್ರಸ್ತಾಪಿತ ಜಮೀನು ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತ, ಶಿವಮೊಗ್ಗ ಇವರಿಗೆ ಕೈಗಾರಿಕಾ ವಸಾಹತು ಸ್ಥಾಪಿಸುವ ಉದ್ದೇಶಕ್ಕೆ ಮಂಜೂರು ಮಾಡಲು ಪೂರಕವಾದ ಪ್ರದೇಶವಾಗಿರುವುದರಿಂದ, ಸದರಿ ನಿಯಮಗಳನ್ನು ಸಡಿಲಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 20(1)(ಸಿ) ರಲ್ಲಿ ಜಮೀನಿನ ಮಾರುಕಟ್ಟೆ ದರದ ಶೇಕಡ 50ರಷ್ಟು ಮೊತ್ತವನ್ನು ಸರ್ಕಾರಕ್ಕೆ ಭರಿಸುವ ಷರತ್ತಿಗೊಳಪಟ್ಟು ಮಂಜೂರು ಮಾಡಲು ಅವಕಾಶ ಕಲ್ಪಿಸಲಾಗಿದೆ. ಅದರಂತೆ ಜಿಲ್ಲಾಧಿಕಾರಿರವರು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 28 ಎಲ್‌ಜಿಎಸ್ 2015, ಬೆಂಗಳೂರು, ದಿನಾಂಕ: 10–03–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು, ಕಸಬಾ ಹೋಬಳಿ, ಯಲಗಳಲೆ ಗ್ರಾಮದ ಸ.ನಂ. 64ರಲ್ಲಿ 12–32 ಎಕರೆ/ಗುಂಟೆ ಹಾಗೂ ಸ.ನಂ.65ರಲ್ಲಿ 5–08 ಎಕರೆ/ಗುಂಟೆ ಒಟ್ಟು 18–00 ಎಕರೆ ಜಮೀನನ್ನು ಮೈಸೂರು ಕಾಗದ ಕಾರ್ಖಾನೆ ರವರಿಂದ ಹಿಂದಕ್ಕೆ ಪಡೆದು ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತ, ಶಿವಮೊಗ್ಗ ಇವರಿಗೆ ಕೈಗಾರಿಕಾ ವಸಾಹತು ಸ್ಥಾಪಿಸುವ ಉದ್ದೇಶಕ್ಕಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 10(2)(iv)ಅನ್ನು ಸಡಿಲಿಸಿ ಹಾಗೂ ಸದರಿ ನಿಯಮಗಳ ನಿಯಮ 20(1)(ಸಿ)ರ ಅನ್ವಯ ಪ್ರಚಲಿತ ಮಾರುಕಟ್ಟೆ ದರದ ಶೇ. 50 ರಷ್ಟು ದರ ವಿಧಿಸಿ ಈ ಕೆಳಕಂಡ ಷರತ್ತಿಗೊಳಪಟ್ಟು ಮಂಜೂರು ಮಾಡಿ ಆದೇಶಿಸಿದೆ :–

1. ಸದರಿ ಜಮೀನನ್ನು ಯಾವ ಉದ್ದೇಶಕ್ಕಾಗಿ ಮಂಜೂರು ಮಾಡಲಾಗಿದೆಯೋ, ಅದೇ ಉದ್ದೇಶಕ್ಕೆ ಮಾತ್ರ ಉಪಯೋಗಿಸತಕ್ಕದ್ದು.
2. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
3. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯ ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ, ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
6. ಮಂಜೂರಾದ ಜಮೀನು ಇಲಾಖೆಗೆ ಅವಶ್ಯವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.

7. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಿಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎಲ್.ಮಹಾಂತೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂಜೂರಾತಿ–1)

**P.R. 346**

**SC – 50**

## INFRASTRUCTURE DEVELOPMENT SECRETARIAT

**Sub :** Appointment of Tender Inviting Authority and Tender Accepting Authority for Development of Shivamogga Airport on Public Private Partnership mode.

**Read :** 1] G.O. No. IDD 140 DIA 2015, Dated :- 13-08-2015.

**Preamble :**

In G.O. read at (1) above, Government has accorded approval for the development of Shivamogga Airport on Public Private Partnership, basis. The Infrastructure Development Department is the procuring entity for the development of Shivamogga Airport Project. To implement the Shivamogga Airport Project on Public Private Partnership mode and to go ahead with the tendering process, the Tender Inviting Authority has to be appointed. Hence the following order is issued.

**GOVERNMENT ORDER NO. IDD 140 DIA 2015, BENGALURU, DATED: 26-04-2016**

In view of the circumstances explained in the preamble, sanction of the Government is accorded for the following :-

1) A Committee constituting of Additional Chief Secretary, Infrastructure Development Department; Managing Director, Karnataka State Industrial Infrastructure Development corporation and Director (PPP), Infrastructure Development Department, shall be the Tender Inviting Authority in terms of the provisions made under the KTPP Act 1999 and Rules 2000.

2) The High level Committee constituted vide G.O. No. IDD 121 DIA 2015, Dated: 16-07-2015 shall be the Tender Accepting Authority as per the KTPP Act 1999 and Rules 2000.

3) The Tender Accepting Authority shall appoint a Tender Scrutiny Committee to evaluate the bids received in response to the tender for selection of the developer for the Shivamogga Airport Project on Public Private Partnership basis.

By Order and in the name of the Governor of Karnataka,

**Robin Vanaraj.J**

Under Secretary to Government

Infrastructure Development Department

**P.R. 347**

**S.C. 100**

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಕಲಬುರಗಿ ವಿಮಾನ ನಿಲ್ದಾಣ ನಿರ್ಮಾಣದ ಬಾಕಿ ಉಳಿದ ಕಾಮಗಾರಿಗಳನ್ನು ಲೋಕೋಪಯೋಗಿ ಇಲಾಖೆಯಿಂದ ಪೂರ್ಣಗೊಳಿಸಲು – ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಮೂಅಇ 101 ರಾಅವಿ 2014, ದಿನಾಂಕ: 25–06–2015.

2) ಸರ್ಕಾರದ ಆದೇಶ ಸಂಖ್ಯೆ: ಮೂಅಇ 119 ರಾಅವಿ 2015, ದಿನಾಂಕ: 09–10–2015.

3) ಮಾನ್ಯ ಮೂಲಸೌಲಭ್ಯ ಅಭಿವೃದ್ಧಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಹಾಗೂ ಹಜ್ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭಾ ನಡವಳಿ ದಿನಾಂಕ: 03–12–2015.

**ಪ್ರಸ್ತಾವನೆ :**

1. ಮೇಲೆ ಓದಲಾದ ಕ್ರಮ ಸಂಖ್ಯೆ. (1)ರ ಸರ್ಕಾರಿ ಆದೇಶದಲ್ಲಿ ಕಲಬುರಗಿ ವಿಮಾನ ನಿಲ್ದಾಣದ ಬಾಕಿ ಉಳಿದಿರುವ ಕಾಮಗಾರಿಗಳನ್ನು ರಾಜ್ಯ ಲೋಕೋಪಯೋಗಿ ಇಲಾಖೆಗೆ ವಹಿಸಲು, ಮೆ॥ ರೈಟ್ಸ್ ಸಂಸ್ಥೆಯನ್ನು ತಾಂತ್ರಿಕ ನೆರವು ಹಾಗೂ ಮೂರನೇ ವ್ಯಕ್ತಿ ಪರಿವೀಕ್ಷಕರನ್ನಾಗಿ ನೇಮಿಸಿಕೊಳ್ಳಲು ಹಾಗೂ ಅದಕ್ಕೆ ಅಗತ್ಯವಿರುವ ಅನುದಾನವನ್ನು ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಿಂದ ಲೋಕೋಪಯೋಗಿ ಇಲಾಖೆಗೆ ಬಿಡುಗಡೆಗೊಳಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿರುತ್ತದೆ.

2. ಮೇಲೆ ಓದಲಾದ ಕ್ರಮ ಸಂಖ್ಯೆ. (2)ರ ಸರ್ಕಾರಿ ಆದೇಶದಲ್ಲಿ ಕಲಬುರಗಿ ವಿಮಾನ ನಿಲ್ದಾಣದ ಬಾಕಿ ಉಳಿದಿರುವ ಕಾಮಗಾರಿಗಳನ್ನು ಪೂರ್ಣಗೊಳಿಸಲು ಮೆ॥ ರೈಟ್ಸ್ ಸಂಸ್ಥೆಯವರನ್ನು ತಾಂತ್ರಿಕ ನೆರವು ಒದಗಿಸಲು ಹಾಗೂ ಮೂರನೇ ವ್ಯಕ್ತಿ ಪರಿವೀಕ್ಷಕರನ್ನಾಗಿ ನೇಮಿಸಿ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿರುತ್ತದೆ.

3. ಮೇಲೆ ಓದಲಾದ ಕ್ರಮ ಸಂಖ್ಯೆ. (3)ರಲ್ಲಿ ಮಾನ್ಯ ಮೂಲಸೌಲಭ್ಯ ಅಭಿವೃದ್ಧಿ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಲೋಕೋಪಯೋಗಿ ಇಲಾಖೆ ಮತ್ತು ಮೆ॥ ರೈಟ್ಸ್ ಸಂಸ್ಥೆಯವರು ಭಾಗವಹಿಸಿದ್ದು, ರನ್‌ವೇ ಉದ್ದವನ್ನು ಎ–320 ಮಾದರಿಯ ವಿಮಾನಗಳ ಹಾರಾಟಕ್ಕೆ ವಿಸ್ತರಿಸಲು ನಿರ್ಧರಿಸಿದಲ್ಲಿ ರನ್‌ವೇಯ ಅಂದಾಜು ವೆಚ್ಚವು ₹. 65.00 ಕೋಟಿಗಳಾಬಹುದೆಂದು, ಇದನ್ನು ಗಮನದಲ್ಲಿಟ್ಟುಕೊಂಡು ಉದ್ದದ ರನ್‌ವೇಯನ್ನು ನಿರ್ಮಿಸುವುದು ಸೂಕ್ತವೆಂದು ಮೆ॥ ರೈಟ್ಸ್ ಸಂಸ್ಥೆಯವರು ತಿಳಿಸಿದ್ದು ಇದರಿಂದ ಕಲಬುರಗಿ ವಿಮಾನ ನಿಲ್ದಾಣದಿಂದ ದೂರದ ಸ್ಥಳಗಳಿಗೆ ವಿಮಾನಯಾನ ಸೇವೆ ಕಲ್ಪಿಸಲು ಅನುಕೂಲವಾಗುವುದರಿಂದ ಮಾನ್ಯ ಸಚಿವರು ಎ–320 ಮಾದರಿ ವಿಮಾನಗಳ ಹಾರಾಟಕ್ಕೆ ಅನುವಾಗುವಂತೆ ಉದ್ದದ ರನ್‌ವೇಯನ್ನು ನಿರ್ಮಿಸಲು ಅಂದಾಜು ಪಟ್ಟಿಯನ್ನು ತಯಾರಿಸುವಂತೆ ಸಭೆಯಲ್ಲಿ ತೀರ್ಮಾನಿಸಲಾಯಿತು.

ಮೆ॥ ರೈಟ್ಸ್ ಸಂಸ್ಥೆಯವರು ಕೆಲವು ಬಾರಿ ಸ್ಥಳ ಪರಿಶೀಲನೆ ನಡೆಸಿ, ವಿವರವಾದ ತಾಂತ್ರಿಕ ಮೌಲ್ಯಮಾಪನ ನಡೆಸಿ, ಕಲಬುರಗಿ ವಿಮಾನ ನಿಲ್ದಾಣದ ಕಾಮಗಾರಿಗಳನ್ನು ಮೂರು ಹಂತಗಳಲ್ಲಿ ಪೂರ್ಣಗೊಳಿಸಲು ಮೂರು ಹಂತದ ವಿವರಗಳು ಈ ಕೆಳಕಂಡಂತಿದೆ.

| ABSTRACT OF COST ESTIMATE | |
|---|---|
| **Name of Work : Completion of Balance works at Kalaburagi Airport in Karnataka – Airbus A – 320 Aircraft** | |
| **DETAILS / DESCRIPTION OF SUB HEADS** | **AMOUNT (`)** |
| **PACKAGE – I**<br>Pavement works, Boundary wall and Operational Fencing and Drainage | **71,26,83,638** |
| **PACKAGE – II**<br>Passenger Terminal Building including Interior etc.<br>Electric Sub Station cum CCR room<br>ATC Tower cum Technical block<br>Fire Station<br>Pump Room<br>External development and services<br>External Electrification / Electrical Equipment Etc. | **22,31,70,980** |
| **PACKAGE – III**<br>Special Systems and Equipments Etc | **12,70,43,585** |
| **Total (Rs.)** | **106,28,98,203** |
| Add Contingencies – 3% | **3,18,86,946** |
| **GRAND TOTAL (₹)** | **109,47,85,149** |

4. ಮೆ॥ ರೈಟ್ಸ್ ಸಂಸ್ಥೆಯವರು ಸಲ್ಲಿಸಿದ ವಿನ್ಯಾಸದ ಪುನರ್ ಪರಿಶೀಲನಾ ವರದಿಯನ್ನು ಆಧರಿಸಿ ಕಾಮಗಾರಿಗಳನ್ನು ತ್ವರಿತವಾಗಿ ಪ್ರಾರಂಭಿಸಲು ಲೋಕೋಪಯೋಗಿ ಇಲಾಖೆಯಿಂದ ಕ್ರಮ ಕೈಗೊಳ್ಳಲಾಗುತ್ತಿದೆ.

5. ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 101 ರಾಅವಿ 2015, ಬೆಂಗಳೂರು, ದಿನಾಂಕ: 27–04–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕಲಬುರಗಿ ವಿಮಾನ ನಿಲ್ದಾಣದ ರನ್‌ವೇನ್ನು ಎ–320 ಮಾದರಿಯ ವಿಮಾನಗಳ ಹಾರಾಟಕ್ಕೆ ಅನುಕೂಲವಾಗುವಂತೆ ನಿರ್ಮಿಸಿ ವಿಮಾನ ನಿಲ್ದಾಣವನ್ನು ಪೂರ್ಣಗೊಳಿಸಲು ಮೆ॥ ರೈಟ್ಸ್‌ರವರು ಮೂರು ಹಂತಗಳಲ್ಲಿ ಈ ಕೆಳಕಂಡ ಪಟ್ಟಿಯಲ್ಲಿ ವಿವರಿಸಿದಂತೆ ಅಂದಾಜಿಸಿರುವ ಒಟ್ಟು ವೆಚ್ಚ ₹. 109,47,85,149/–ಗಳಿಗೆ (ನೂರ ಒಂಭತ್ತು ಕೋಟಿ ನಲವತ್ತೇಳು ಲಕ್ಷದ ಎಂಬತ್ತೈದು ಸಾವಿರದ ನೂರ ನಲವತ್ತೊಂಭತ್ತು ಮಾತ್ರ) ಆಡಳಿತಾತ್ಮಕ ಅನುಮೋದನೆಯೊಂದಿಗೆ ಈ ಯೋಜನೆಯ ಒಟ್ಟಾರೆ ವೆಚ್ಚ ಮೂರನೇ ಒಂದು ಭಾಗವನ್ನು (1/3rd) ಹೈದ್ರಾಬಾದ್–ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿಯ ಅನುದಾನದಿಂದ ಭರಿಸಲು ಹಾಗೂ ಉಳಿದ ಅನುದಾನವನ್ನು ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಿಂದ ಭರಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

| ABSTRACT OF COST ESTIMATE | |
|---|---|
| **Name of Work : Completion of Balance works at Kalaburagi Airport in Karnataka – Airbus A – 320 Aircraft** | |
| **DETAILS / DESCRIPTION OF SUB HEADS** | **AMOUNT (`)** |
| **PACKAGE – I**<br>Pavement works, Boundary wall and Operational Fencing and Drainage | **71,26,83,638** |

| | |
|---|---|
| **PACKAGE – II**<br>Passenger Terminal Building including Interior etc.<br>Electric Sub Station cum CCR room<br>ATC Tower cum Technical block<br>Fire Station<br>Pump Room<br>External development and services<br>External Electrification / Electrical Equipment Etc. | **22,31,70,980** |
| **PACKAGE – III**<br>Special Systems and Equipments Etc | **12,70,43,585** |
| **Total (₹)**<br>Add Contingencies – 3%<br>**GRAND TOTAL (₹)** | **106,28,98,203**<br>**3,18,86,946**<br>**109,47,85,149** |

2. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: Pr.Secy.FD No. 1684, ದಿನಾಂಕ: 13–04–2016ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರಾಬಿನ್ ವನರಾಜ್.ಜೆ.**
ಸರ್ಕಾರದ ಅಧೀನ ಕಾರ್ಯದರ್ಶಿ
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

**P.R. 348**
**SC – 30**

## ಇಂಧನ ಸಚಿವಾಲಯ

**ವಿಷಯ :** ಶ್ರೀ ಕೆ.ಚಂದ್ರಶೇಖರ ರೆಡ್ಡಿ, ವಿದ್ಯುತ್ ಪರಿವೀಕ್ಷಕರು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶದ ಸಂಖ್ಯೆ: ಇಎನ್ 52 ಇಬಿಎಸ್ 2008, ದಿನಾಂಕ: 15–07–2006.
2) ಆದೇಶ ಸಂಖ್ಯೆ: ಇಎನ್ 52 ಇಬಿಎಸ್ 2006, ದಿನಾಂಕ: 09–10–2006.
3) ಆದೇಶ ಸಂಖ್ಯೆ: 52 ಇಬಿಎಸ್ 2006, ದಿನಾಂಕ: 30–10–2006.
4) ದಿನಾಂಕ: 27–11–2008ರ ಸರ್ಕಾರಿ ಆದೇಶ ಸಂಖ್ಯೆ: ಇಎನ್ 52 ಇಬಿಎಸ್ 2006.
5) ಉಪ ನಿಬಂಧಕರು, ವಿಚಾರಣೆ–5, ಲೋಕಾಯುಕ್ತ ಕಾರ್ಯಾಲಯ ಇವರ ಪತ್ರ ಸಂಖ್ಯೆ: ಕಂಪ್ಲೆಂಟ್/ ಉಪಲೋಕ್/ಜಿಎಲ್‌ಬಿ–334/2007/ಡಿಆರ್‌ಇ–5, ದಿನಾಂಕ: 12–09–2012.
6) ಬಳ್ಳಾರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಆದೇಶ ದಿನಾಂಕ: 27–02–2013.

**ಪ್ರಸ್ತಾವನೆ :**

1. ಶ್ರೀ ಕೆ.ಚಂದ್ರಶೇಖರ್ ರೆಡ್ಡಿ, (ಕೆ.ಸಿ.ರೆಡ್ಡಿ), ವಿದ್ಯುತ್ ಪರಿವೀಕ್ಷಕರು, ಬಳ್ಳಾರಿ ಇವರು ಬಳ್ಳಾರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಟ್ರಾನ್ಸ್‌ಮಿಷನ್ ಸೆಂಟರ್‌ಗಳನ್ನು ತಪಾಸಣೆ ಮಾಡಿ ಪರವಾನಗಿಯ ಪತ್ರ ನೀಡಲು ಅಕ್ರಮ ಹಣವನ್ನು ಕೇಳಿದರು ಎಂಬ ದೂರಿನ ಮೇಲೆ ದಿನಾಂಕ: 19–06–2006ರಂದು ಆರೋಪಿತರ ಕಛೇರಿಯಲ್ಲಿ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಯಲ್ಲಿ ₹. 10,000/– ಲಂಚ ಪಡೆಯುವಾಗ ಸಿಕ್ಕಿಬಿದ್ದಿರುತ್ತಾರೆ. ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 10(1)(ಎ)ರ ಮೇರೆಗೆ ತನಿಖೆಯನ್ನು ಬಾಕಿ ಇಟ್ಟು ಮೇಲೆ ಓದಲಾದ ಸಂಖ್ಯೆ. (1)ರ ಆದೇಶದಲ್ಲಿ ಶ್ರೀ ಕೆ.ಸಿ.ರೆಡ್ಡಿ ಇವರನ್ನು ಅಮಾನತ್ತಿನಲ್ಲಿಡಲಾಗಿತ್ತು. ನಂತರ ಮೇಲೆ ಓದಲಾದ ಸರ್ಕಾರಿ ಆದೇಶ ಸಂಖ್ಯೆ. (2)ರಲ್ಲಿ ಸದರಿಯವರ ಅಮಾನತ್ತನ್ನು ತೆರವುಗೊಳಿಸಿ ಅವರ ವಿರುದ್ಧ ಹೂಡಲಾಗಿರುವ ಪ್ರಕರಣ ಸಂಖ್ಯೆ: 6/2006 ಹಾಗೂ ಸಕ್ಷಮ ನ್ಯಾಯಾಲಯದಲ್ಲಿ ಹೂಡಬಹುದಾದ ಪ್ರಕರಣಗಳಲ್ಲಿ ಆಗುವ ಅಂತಿಮ ತೀರ್ಮಾನವನ್ನು ಬಾಕಿ ಇಟ್ಟು ಧಾರವಾಡದಲ್ಲಿ ಖಾಲಿ ಇದ್ದ ವಿದ್ಯುತ್ ಪರಿವೀಕ್ಷಕರ ಹುದ್ದೆಗೆ ನೇಮಕ ಮಾಡಲಾಗಿತ್ತು. ನಂತರ ಲೋಕಯುಕ್ತ ಪೊಲೀಸರ ಕೋರಿಕೆಯಂತೆ ಸದರಿಯವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1) (ಡಿ) ಸಹವಾಚನ 13(2)ರ ಮೇರೆಗೆ ಸದರಿಯವರು ಎಸಗಿರುವ ಶಿಕ್ಷಾರ್ಹ ಅಪರಾಧ ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)ರನ್ವಯ ಅಭಿಯೋಜನೆಗೊಳಿಸಲು ಮೇಲೆ ಓದಲಾದ ಸಂಖ್ಯೆ. (3)ರಲ್ಲಿನ ಸರ್ಕಾರಿ ಆದೇಶದಲ್ಲಿ ಮಂಜೂರಾತಿ ನೀಡಲಾಯಿತು.

2. ಶ್ರೀ ಕೆ.ಚಂದ್ರಶೇಖರ್ ರೆಡ್ಡಿಯವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಮೇಲೆ ಕ್ರಮ ಸಂಖ್ಯೆ. (4)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಡಿ.ವಿ.ಶೇಠ್, ನಿವೃತ್ತ ನ್ಯಾಯಾಧೀಶರು ಇವರನ್ನು ನೇಮಕ ಮಾಡಲಾಗಿತ್ತು. ಆದರೆ, ಉಪ ನಿಬಂಧಕರು, ಕರ್ನಾಟಕ ಲೋಕಾಯುಕ್ತ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ. (5)ರ ಪತ್ರದಲ್ಲಿ ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ನಡೆಸಲು ನಿವೃತ್ತ ನ್ಯಾಯಾಧೀಶರನ್ನು ನೇಮಕ ಮಾಡಲಾಗಿರುವ ಕ್ರಮವು ನಿಯಮಗಳಿಗನುಗುಣವಾಗಿಲ್ಲವೆಂದು ತಿಳಿಸಿ, ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ 12(3)ರನ್ವಯ ಇಲಾಖಾ ವಿಚಾರಣೆಯನ್ನು ಮಾನ್ಯ ಉಪಲೋಕಾಯುಕ್ತರಿಗೆ ವಹಿಸಬೇಕಾಗಿ ಕೋರಿರುತ್ತಾರೆ.

3. ಈ ಮಧ್ಯೆ ಮೇಲೆ ಓದಲಾದ ಕ್ರಮ ಸಂಖ್ಯೆ. (6)ರ ತೀರ್ಪಿನಲ್ಲಿ ಶ್ರೀ ಕೆ.ಚಂದ್ರಶೇಖರ್ ರೆಡ್ಡಿರವರ ವಿರುದ್ಧ ಕ್ರಿಮಿನಲ್ ಪ್ರಕರಣದಲ್ಲಿ ಬಳ್ಳಾರಿ ಜಿಲ್ಲಾ ಸತ್ರ ಮತ್ತು ನ್ಯಾಯಾಲಯವು ಕಠಿಣ ಸಜೆ ಶಿಕ್ಷೆಯನ್ನು ವಿಧಿಸಿದ ಕಾರಣ, ಇವರನ್ನು ಸೇವೆಯಿಂದ ತೆಗೆದುಹಾಕಲಾಯಿತು. ಆದಕಾರಣ ಇಲಾಖಾ ವಿಚಾರಣೆಯನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವ ಕುರಿತು ಯಾವುದೇ ನಿರ್ಣಯವನ್ನು ತೆಗೆದುಕೊಂಡಿರುವುದಿಲ್ಲ. ಬಳ್ಳಾರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಆದೇಶವನ್ನು ಪ್ರಶ್ನಿಸಿ ಶ್ರೀ ಕೆ.ಚಂದ್ರಶೇಖರ್ ರೆಡ್ಡಿರವರು ಮಾನ್ಯ ಉಚ್ಚ ನ್ಯಾಯಾಲಯ, ಧಾರವಾಡ ಪೀಠದಲ್ಲಿ ಸಲ್ಲಿಸಿದ ಕ್ರಿಮಿನಲ್ ಮೇಲ್ಮನವಿ ಸಂಖ್ಯೆ: 2573/2013ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ: 16–09–2014ರಂದು ತೀರ್ಪು ನೀಡಿ ಸದರಿಯವರ ವಿರುದ್ಧ ಅಭಿಯೋಜನೆಗೆ ಮಂಜೂರಾತಿ ನೀಡಲಾದ ಸರ್ಕಾರದ ಆದೇಶವನ್ನು ಹಾಗೂ ಬಳ್ಳಾರಿ ಜಿಲ್ಲಾ ಮತ್ತು ನ್ಯಾಯಾಲಯದ ತೀರ್ಪನ್ನು ತಳ್ಳಿಹಾಕಿದ್ದು, ತತ್ಪರಿಣಾಮ ಇವರನ್ನು ಪುನ: ಸೇವೆಗೆ ತೆಗೆದುಕೊಳ್ಳಲು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 7250/2013ರಲ್ಲಿ ದಿನಾಂಕ: 13–01–2015ರಂದು ನೀಡಿದ ತೀರ್ಪಿನಲ್ಲಿ ನಿರ್ದೇಶನ ನೀಡಿರುತ್ತದೆ. ಅದರಂತೆ, ಪ್ರಸ್ತಾಪಿತ ಅಧಿಕಾರಿಯನ್ನು ಮೇಲೆ ಕ್ರಮ ಸಂಖ್ಯೆ. (6)ರಲ್ಲಿ ಓದಲಾದ ಆದೇಶದನ್ವಯ ಪುನ: ಸೇವೆಗೆ ತೆಗೆದುಕೊಳ್ಳಲಾಗಿದೆ.

4. ಶ್ರೀ ಕೆ.ಚಂದ್ರಶೇಖರ್ ರೆಡ್ಡಿ, ವಿದ್ಯುತ್ ಪರಿವೀಕ್ಷಕರು ಇವರನ್ನು ಪುನ: ಸೇವೆಗೆ ತೆಗೆದುಕೊಳ್ಳಲಾದ ಹಿನ್ನೆಲೆಯಲ್ಲಿ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವಂತೆ ಕೋರಲಾದ ಉಪ ನಿಬಂಧಕರು, ವಿಚಾರಣೆಗಳು – 5, ಕರ್ನಾಟಕ ಲೋಕಾಯುಕ್ತ ಇವರ ಮೇಲೆ ಕ್ರಮ ಸಂಖ್ಯೆ. (4)ರಲ್ಲಿ ಓದಲಾದ ಪತ್ರದ ಕುರಿತು ಮುಂದಿನ ಕ್ರಮ ಕೈಗೊಳ್ಳುವ ಅಗತ್ಯವಿರುತ್ತದೆ. ಆದುದರಿಂದ, ಸರ್ಕಾರವು ಈ ಸಂಬಂಧ ಪೂರ್ಣ ಪ್ರಮಾಣದ ವಿಚಾರಣೆಯನ್ನು ಕರ್ನಾಟಕ ಲೋಕಾಯುಕ್ತಕ್ಕೆ ವಹಿಸಲು ನಿರ್ಣಯಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 14 ಇಬಿಎಸ್ 2016, ಬೆಂಗಳೂರು, ದಿನಾಂಕ: 27–04–2016.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಕೆ.ಚಂದ್ರಶೇಖರ್ ರೆಡ್ಡಿ, ವಿದ್ಯುತ್ ಪರಿವೀಕ್ಷಕರು, ವಿದ್ಯುತ್ ಪರಿವೀಕ್ಷಣಾ ಇಲಾಖೆ, ಬಳ್ಳಾರಿ ಇವರ ವಿರುದ್ಧ ದಾಖಲಾದ ಲೋಕಾಯುಕ್ತ ಟ್ರ್ಯಾಪ್ ಪ್ರಕರಣ ಸಂಖ್ಯೆ: 6/2006ಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಯನ್ನು ನಿವೃತ್ತ ನ್ಯಾಯಾಧೀಶರಾದ ಶ್ರೀ ಡಿ.ವಿ.ಶೇಠ್ ರವರಿಗೆ ವಹಿಸಲಾದ ದಿನಾಂಕ: 27–11–2008ರ ಸರ್ಕಾರಿ ಆದೇಶ ಸಂಖ್ಯೆ: ಇಎನ್ 52 ಇಬಿಎಸ್ 2006ನ್ನು ಹಿಂಪಡೆದು, ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 14(ಎ)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಪ್ರಕರಣದ ಸತ್ಯಾ ಸತ್ಯತೆಯನ್ನು ತಿಳಿಯಲು ಇಲಾಖಾ ವಿಚಾರಣೆಗಾಗಿ ಸದರಿ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಶಿವಕುಮಾರ್**
ಪೀಠಾಧಿಕಾರಿ
ಇಂಧನ ಇಲಾಖೆ.

**P.R. 349**
**SC – 50**

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಸಾರ್ವಜನಿಕ ವಿತರಣಾ ಪದ್ಧತಿಯಡಿ ಆದ್ಯತೇತರ ಕುಟುಂಬದ ಪಡಿತರ ಚೀಟಿದಾರರಿಗೆ ವಿತರಿಸುತ್ತಿರುವ ಆಹಾರಧಾನ್ಯಗಳ ಪರಿಷ್ಕರಣೆ ಕುರಿತು.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಆನಾಸ 204 ಡಿಆರ್ಎ 2015, ದಿನಾಂಕ: 07–04–2015.

2) ಆಯುಕ್ತರು, ಆನಾಸ ಮತ್ತು ಗ್ರಾಪ್ರ ಇಲಾಖೆ ಇವರ ಕಛೇರಿಯ ಪತ್ರ ಸಂಖ್ಯೆ: ಸಿಎಫ್ಎಸ್/ಪಿಡಿ/I/ಆ.ಧಾ/I(1) 2016–17, ದಿನಾಂಕ: 02–04–2016.

3) ಆಯುಕ್ತರು, ಆನಾಸ ಮತ್ತು ಗ್ರಾಪ್ರ ಇಲಾಖೆ ಇವರ ಕಛೇರಿಯ ಪತ್ರ ಸಂಖ್ಯೆ: ಸಿಎಫ್ಎಸ್/ಪಿಡಿ/ **Coarse grains/**2015–16, ದಿನಾಂಕ: 07–04–2016.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಸಕಾರದ ಆದೇಶದಲ್ಲಿ ಮೇ – 2015ರ ಮಾಹೆಯಿಂದ ಜಾರಿಗೆ ಬರುವಂತೆ ಸಾರ್ವಜನಿಕ ಪಡಿತರ ವಿತರಣಾ ವ್ಯವಸ್ಥೆಯಡಿ ಆದ್ಯತಾ ಕುಟುಂಬದ ಪ್ರತಿ ಸದಸ್ಯರಿಗೆ 5 ಕೆ.ಜಿ. ಆಹಾರಧಾನ್ಯವನ್ನು ಉಚಿತವಾಗಿ ವಿತರಿಸಲು ಆದೇಶಿಸಲಾಗಿತ್ತು.

ಉಲ್ಲೇಖಿತ (2) ಮತ್ತು (3)ರ ಪತ್ರಗಳಲ್ಲಿ ಕನಿಷ್ಟ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ರಾಜ್ಯದ ಮೂರು ಖರೀದಿ ಏಜೆನ್ಸಿಗಳಿಂದ ಹೆಚ್ಚಿನ ರಾಗಿ ಸಂಗ್ರಹವಾಗಿರುವುದರಿಂದ ಇದನ್ನು ಸಾರ್ವಜನಿಕ ವಿತರಣಾ ಪದ್ಧತಿಯಡಿ ಪಡಿತರ ಚೀಟಿದಾರರಿಗೆ ವಿತರಿಸುವಂತೆ ಆಯುಕ್ತರು, ಆನಾಸ ಮತ್ತು ಗ್ರಾಪ್ರ ಇಲಾಖೆ ಇವರು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 109 ಡಿಆರ್ಎ 2016, ದಿನಾಂಕ: 30–04–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸಾರ್ವಜನಿಕ ಪಡಿತರ ವಿತರಣಾ ವ್ಯವಸ್ಥೆಯಡಿಯಲ್ಲಿ ಆದ್ಯತಾ ಕುಟುಂಬದ ಕಾರ್ಡ್‌ದಾರರಿಗೆ ಈ ಕೆಳಕಂಡಂತೆ ಪಡಿತರವನ್ನು ಜೂನ್ 2016ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕೆಳಕಂಡಂತೆ ಪುನರ್ ನಿಗಧಿಪಡಿಸಲಾಗಿದೆ.

1. ಪ್ರತಿ ಯೂನಿಟ್‌ಗೆ 3 ಕೆ.ಜಿ. ಅಕ್ಕಿ ಮತ್ತು 2 ಕೆ.ಜಿ. ಗೋಧಿ/ರಾಗಿ/ಜೋಳ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎನ್.ಕೃಷ್ಣಮೂರ್ತಿ**

ಸರ್ಕಾರದ ಉಪ ಕಾರ್ಯದರ್ಶಿ

ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**P.R. 350**

**SC – 200**

## ಆರ್ಥಿಕ ಸಚಿವಾಲಯ

**ವಿಷಯ :** ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಅರ್ಜಿ ಸಂಖ್ಯೆ: 1202/2016ರಿಂದ 1302/2016ರಲ್ಲಿ ನೀಡಿದ ಆದೇಶವನ್ನು ಅನುಷ್ಠಾನಗೊಳಿಸಿ ಶ್ರೀ ಯಲ್ಲಪ್ಪ ಪಾಯಪ್ಪ ಹಿತ್ತಲಮನಿ ಮತ್ತು ಶ್ರೀ ಭೀಮನಗೌಡ ಪಾಟೀಲ್, ನಿವೃತ್ತ ದ್ವಿತೀಯ ದರ್ಜೆ ಸಹಾಯಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ ಅವರುಗಳಿಗೆ ಕೆ.ಸಿ.ಎಸ್.ಆರ್. ನಿಯಮ 247–ಎ(1)ರಡಿ ಸೌಲಭ್ಯ ನೀಡುವ ಬಗ್ಗೆ.

**ಓದಲಾಗಿದೆ :** 1) ಅರ್ಜಿ ಸಂಖ್ಯೆ: 1202–1302/2016ರಲ್ಲಿ (ವಿಜಯಕುಮಾರ್ ಮತ್ತು ಇತರರು ವಿರುದ್ಧ ರಾಜ್ಯ ಸರ್ಕಾರ) ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ನೀಡಿರುವ ಆದೇಶ ದಿನಾಂಕ: 09–02–2016.

2) ಅರ್ಜಿ ಸಂಖ್ಯೆ: 6760/2012ರಲ್ಲಿ (ಇ.ಮಂಜುನಾಥ ಮತ್ತು ಇತರರು ವಿರುದ್ಧ ರಾಜ್ಯ ಸರ್ಕಾರ) ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ನೀಡಿರುವ ಆದೇಶ ದಿನಾಂಕ: 09–02–2016.

3) ಶ್ರೀ ಯಲ್ಲಪ್ಪ ಪಾಯಪ್ಪ ಹಿತ್ತಲಮನಿ ಮತ್ತು ಶ್ರೀ ಭೀಮನಗೌಡ ಪಾಟೀಲ್, ನಿವೃತ್ತ ದ್ವಿತೀಯ ದರ್ಜೆ ಸಹಾಯಕರು ನೀಡಿದ ದಿನಾಂಕ: 08–03–2016ರ ಮನವಿ.

4) Review Petition (Civil) 283-298/2016 in Special Leave Petition (Civil) 21447-21462/2015 ಗಳಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಿರುವ ಆದೇಶ ದಿನಾಂಕ: 17–02–2016.

5) ಸರ್ಕಾರದ ಪತ್ರ ಸಂಖ್ಯೆ: ಎಫ್‌ಡಿ 6 ಎಸ್‌ಆರ್‌ಎ 2015, ದಿನಾಂಕ: 23–02–2016.

**ಪ್ರಸ್ತಾವನೆ :**

ಶ್ರೀ ಯಲ್ಲಪ್ಪ ಪಾಯಪ್ಪ ಹಿತ್ತಲಮನಿ ಮತ್ತು ಶ್ರೀ ಭೀಮನಗೌಡ ಪಾಟೀಲ್, ನಿವೃತ್ತ ದ್ವಿತೀಯ ದರ್ಜೆ ಸಹಾಯಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ ಅವರುಗಳು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ದಾಖಲಾಗಿದ್ದ ಅರ್ಜಿ ಸಂಖ್ಯೆ: 1202–1302/2016ರಲ್ಲಿನ ಅರ್ಜಿದಾರರ ಪೈಕಿ ಇಬ್ಬರಾಗಿದ್ದು (52 ಮತ್ತು 53ನೇ ಅರ್ಜಿದಾರರು) ತಾವು ಸರ್ಕಾರಿ ಸೇವೆಗೆ ಸೇರುವ ಮೊದಲು ಮಿತವೇತನ ಪದವೀಧರರ ಯೋಜನೆಯಡಿಯಲ್ಲಿ ಸೇವೆ ಸಲ್ಲಿಸಿದ ಅವಧಿಯ ಪೈಕಿ 8 ವರ್ಷಗಳ ಅರ್ಹತಾದಾಯಕ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247–ಎ ರನ್ವಯ ಪಿಂಚಣಿ ಮತ್ತು ಇತರೆ ಸೌಲಭ್ಯಗಳನ್ನು ಪರಿಷ್ಕರಿಸಲು ಸರ್ಕಾರಕ್ಕೆ ಸೂಚಿಸುವಂತೆ ಅರ್ಜಿಯಲ್ಲಿ ಕೋರಿದ್ದರು.

Order on the claim of the applicants within three months from the date of receipt of such representations."

ಮೇಲಿನ ಕೆ.ಎ.ಟಿ. ಆದೇಶವನ್ನು ಅನುಸರಿಸಿ ಶ್ರೀ ಯಲ್ಲಪ್ಪ ಪಾಯಪ್ಪ ಹಿತ್ತಲಮನಿ ಮತ್ತು ಶ್ರೀ ಭೀಮನಗೌಡ ಪಾಟೀಲ್, ನಿವೃತ್ತ ದ್ವಿತೀಯ ದರ್ಜೆ ಸಹಾಯಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ ಅವರುಗಳ ಮೇಲೆ (3)ರಲ್ಲಿ ಓದಲಾದ ದಿನಾಂಕ: 08–03–2016ರ ಮನವಿಗಳನ್ನು ಸಲ್ಲಿಸಿ ತಾವುಗಳು ಕ್ರಮವಾಗಿ ದಿನಾಂಕ: 30–11–2010ರಂದು ಮತ್ತು ದಿನಾಂಕ: 31–01–2012ರಂದು ನಿವೃತ್ತಿ ಹೊಂದಿದ್ದು ಮಂಡಳಿಯ ಆದೇಶವನ್ನು ಅನುಷ್ಠಾನಗೊಳಿಸಿ ಸರ್ಕಾರಿ ಸೇವೆಗೆ ಸೇರುವ ಮುನ್ನ ಮಿತವೇತನ ಪದವೀಧರರಾಗಿ ಸೇವೆ ಸಲ್ಲಿಸಿದ್ದು, 8 ವರ್ಷಗಳನ್ನು ನಿವೃತ್ತಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆ ಎಂದು ಪರಿಗಣಿಸಲು ಕೋರಿದ್ದಾರೆ. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247–ಎ ರನ್ವಯ ಸೇರ್ಪಡೆಗೊಳಿಸಬಹುದಾದ ಗರಿಷ್ಠ ಅವಧಿಯು ಈ ಕೆಳಗಿನಂತಿದೆ.

1. ದಿ: 09–11–2004ಕ್ಕೂ ಪೂರ್ವದಲ್ಲಿ ನಿವೃತ್ತಿ ಹೊಂದಿದ ಪ್ರಕರಣಗಳಲ್ಲಿ – 8 ವರ್ಷಗಳು.
2. ದಿ: 09–11–2004ರಿಂದ ದಿ: 14–02–2012ರವರೆಗೆ ನಿವೃತ್ತಿ ಹೊಂದಿದ ಪ್ರಕರಣಗಳಲ್ಲಿ – 4 ವರ್ಷಗಳು
   (ಅಧಿಸೂಚನೆ ಸಂಖ್ಯೆ: ಎಫ್‌ಡಿ 1 ಎಸ್‌ಆರ್‌ಎ 2004, ದಿ: 04–11–2004 w.e.f. 09-11-2004)
3. ದಿ: 15–02–2012ರಿಂದ ನಿವೃತ್ತಿ ಹೊಂದಿದ ಪ್ರಕರಣಗಳು – 2 ವರ್ಷಗಳು
   (ಅಧಿಸೂಚನೆ ಸಂಖ್ಯೆ: ಎಫ್‌ಡಿ 4 ಎಸ್‌ಆರ್‌ಎ 2010, ದಿ: 15–02–2012)

ಶ್ರೀ ಯಲ್ಲಪ್ಪ ಪಾಯಪ್ಪ ಹಿತ್ತಲಮನಿ ಮತ್ತು ಶ್ರೀ ಭೀಮನಗೌಡ ಪಾಟೀಲ್, ನಿವೃತ್ತ ದ್ವಿತೀಯ ದರ್ಜೆ ಸಹಾಯಕರು ಇವರುಗಳು ಕ್ರಮವಾಗಿ ದಿ: 30–11–2010 ಮತ್ತು ದಿ: 31–01–2012ರಂದು ನಿವೃತ್ತರಾಗಿರುವುದರಿಂದ, ಮೇಲಿನ ಕ್ರಮ ಸಂಖ್ಯೆ. 2ರ ಅಧಿಸೂಚನೆಯ ಪ್ರಕಾರ ಇಬ್ಬರು ನೌಕರರುಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247–ಎ ರಡಿಯಲ್ಲಿ ಗರಿಷ್ಠ 4 ವರ್ಷಗಳ ಅಧಿಕ ಸೇವಾವಧಿಯನ್ನು ಪ್ರಸ್ತುತ ಸೇವೆಯ ನಿವೃತ್ತಿ ವೇತನ ಸೌಲಭ್ಯಗಳಿಗೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಅರ್ಹರಾಗಿದ್ದು, ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 23 ಕವಿಇ 2016, ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಇಲಾಖೆಯು ನೀಡಿರುವ ಮಾಹಿತಿಗಳನ್ನು ಮೂಲ ಸೇವಾ ಪುಸ್ತಕ ಮತ್ತು ಇತರೆ ದಾಖಲೆಗಳಿಂದ ಖಚಿತಪಡಿಸಿಕೊಳ್ಳುವ ಷರತ್ತಿಗೊಳಪಟ್ಟು ಕೆ.ಎ.ಟಿ. ಆದೇಶದನ್ವಯ ಶ್ರೀ ಯಲ್ಲಪ್ಪ ಪಾಯಪ್ಪ ಹಿತ್ತಲಮನಿ ಮತ್ತು ಶ್ರೀ ಭೀಮನಗೌಡ ಪಾಟೀಲ್, ನಿವೃತ್ತ ದ್ವಿತೀಯ ದರ್ಜೆ ಸಹಾಯಕರು, ಇವರುಗಳಿಗೆ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 247–ಎ(1)ರನ್ವಯ ಗರಿಷ್ಠ 4 (ನಾಲ್ಕು) ವರ್ಷಗಳ ಅಧಿಕ ಸೇವಾವಧಿಯನ್ನು ಶ್ರೀಯುತ ಪ್ರಸ್ತುತ ಸೇವೆಯ ನಿವೃತ್ತಿ ವೇತನ ಸೌಲಭ್ಯಗಳಿಗೆ ಮಾತ್ರ ಅರ್ಹತಾದಾಯಕ ಸೇವೆ ಎಂದು ಪರಿಗಣಿಸಲು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ (ಸೇವೆಗಳು–3) ಶಾಖೆಯ ಟಿಪ್ಪಣಿ ಸಂಖ್ಯೆ: ಆಇ 350 ಸೇ:3 2016, ದಿನಾಂಕ: 22–04–2016ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

**P.R. 354**

## ಸಹಕಾರ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಕೃಷಿ ಸಹಕಾರ ಸಂಘಗಳಿಂದ / ಬ್ಯಾಂಕುಗಳಿಂದ ರೈತರು ಪಡೆದ ಅಲ್ಪಾವಧಿ ಬೆಳೆ ಸಾಲ ಮನ್ನಾ–2012 ಆದೇಶದಡಿ ಬಾಕಿ ಇರುವ ಬಿಲ್ಲುಗಳಿಗೆ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**
1) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಸಿಆರ್‌ಡಿ/ಸಿಎಬಿ–1/4/2014–15, ದಿನಾಂಕ: 18–02–2015.
2) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್‌ಸಿಎಸ್/ಸಿಆರ್‌ಡಿ/ಸಿಎಬಿ–1/30/2012–13, ದಿನಾಂಕ: 30–03–2016.
3) ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 06 ವೆಚ್ಚ–2 2016, ದಿನಾಂಕ: 20–01–2016.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ನಿಬಂಧಕರ ಪತ್ರ ಮತ್ತು ಓದಲಾದ (2)ರ ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ನಿಬಂಧಕರ ಕಛೇರಿ ಇವರು ಸಾಲ ಮನ್ನಾ ಯೋಜನೆ – 2012ರಲ್ಲಿ ಬಿಡುಗಡೆಗೆ ಬಾಕಿ ಇದ್ದ ಮೊತ್ತ ರೂ. 1031.25 ಲಕ್ಷಗಳು ಮತ್ತು ಸರ್ಕಾರದ ಸ್ಪಷ್ಟೀಕರಣಕ್ಕೆ ಬಾಕಿ ಇದ್ದ ಮೊತ್ತ ರೂ. 882.15 ಲಕ್ಷಗಳು ಒಟ್ಟಾರೆ ರೂ. 1913.40 ಲಕ್ಷಗಳಿಗೆ 2015–16ನೇ ಸಾಲಿನ ಪೂರಕ ಅಂದಾಜಿನಲ್ಲಿ ಅವಕಾಶ ಕಲ್ಪಿಸಿ ಹಣ ಬಿಡುಗಡೆ ಮಾಡಿ ಆದೇಶ ಹೊರಡಿಸಲು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3)ರ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 06 ವೆಚ್ಚ–2/2016, ದಿನಾಂಕ: 20–01–2016ರಲ್ಲಿ ಸಾಲ ಮನ್ನಾ ಯೋಜನೆ–2012ರ ಅಡಿ ಒಟ್ಟು ರೂ. 1913.00 ಲಕ್ಷಗಳ ಮೊತ್ತವನ್ನು ಪೂರಕ ಅಂದಾಜುಗಳು–3ರಲ್ಲಿ ಬಿಡುಗಡೆಗೊಳಿಸಲಾಗುವುದು ಎಂದು ತಿಳಿಸಲಾಗಿದ್ದು, ದಿನಾಂಕ: 30–03–2016ರಂದು ಪೂರಕ ಅಂದಾಜು–3ರ ಅಭಿಯಾಚನೆ ಕ್ರಮಾಂಕ–09, ಸಹಕಾರ, ಬಾಬ್ತು ಸಂಖ್ಯೆ-1ರಲ್ಲಿ ಸದನದ ಅನುಮೋದನೆ ದೊರೆತಿರುತ್ತದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ನಿಬಂಧಕರ ಪ್ರಸ್ತಾವನೆಗಳನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 345 ಸಿಎಲ್‌ಎಸ್ 2014, ಬೆಂಗಳೂರು, ದಿನಾಂಕ: 30–03–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸಾಲ ಮನ್ನಾ ಯೋಜನೆ–2012ರಲ್ಲಿ ಬಾಕಿ ಇರುವ ಬಿಲ್ಲುಗಳನ್ನು ಪಾವತಿಸಲು ಅನುವಾಗುವಂತೆ 2015–16ನೇ ಸಾಲಿನ ಪೂರಕ ಅಂದಾಜು–3 (SE-III)ರಲ್ಲಿ ಈ ಉದ್ದೇಶಕ್ಕಾಗಿ ಲೆಕ್ಕ ಶೀರ್ಷಿಕೆ 2425–00–107–2–46 ಸಾಲ ಮನ್ನಾ-106 ಸಹಾಯಧನ ಯೋಜನೆ ಅಡಿ ಒದಗಿಸಿರುವ ಅನುದಾನ ರೂ. 1913.00 ಲಕ್ಷಗಳಿಗೆ ಮಂಜೂರಾತಿ ನೀಡಿ ಬಿಡುಗಡೆ ಮಾಡಿ ಆದೇಶ ಹೊರಡಿಸಿದೆ.

ಈ ಮೊತ್ತವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರ ಮೇಲು ರುಜು ಪಡೆದು ಖಜಾನೆಯಿಂದ ಡ್ರಾ ಮಾಡತಕ್ಕದ್ದು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇಲ್ಲಿ ಠೇವಣಿಸಿ, ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಿಸಿದ ಬ್ಯಾಂಕುಗಳಿಗೆ ಬಿಡುಗಡೆ ಮಾಡುವುದು ಮತ್ತು ಈ ಹಣವನ್ನು ಸಂಬಂಧಿಸಿದ ಫಲಾನುಭವಿಗಳ ಖಾತೆಗೆ ಕೂಡಲೇ ಬಿಡುಗಡೆ ಮಾಡಿ ಬಳಕೆ ಪ್ರಮಾಣ ಪತ್ರಗಳನ್ನು ಸರ್ಕಾರಕ್ಕೆ ಮತ್ತು ಮಹಾಲೇಖಪಾಲರಿಗೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 06 ವೆಚ್ಚ–2/2016, ದಿನಾಂಕ: 20–01–2016ರಲ್ಲಿ ನೀಡಿರುವ ಸಹಮತಿ ಮೇರೆಗೆ ಮತ್ತು ದಿನಾಂಕ: 30–03–2016ರ ಪೂರಕ ಅಂದಾಜು–3ರ ಅಭಿಯಾಚನೆ ಸಂಖ್ಯೆ. 9ರ ಬಾಬ್ತು ಸಂಖ್ಯೆ–1ರಲ್ಲಿ ನೀಡಿರುವ ಅನುಮತಿಯಂತೆ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ
ಸಹಕಾರ ಇಲಾಖೆ

**P.R. 355**
**SC – 100**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.